ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲಾ, ಕೊಪ್ಪಳ.

ಪಿ.ಆರ್.1702

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:73/ 2009, ದಿನಾಂಕ:15.09.2009**

**ಅರ್ಜಿದಾರರು:**

1) ಶ್ರೀಮತಿ ಈರಮ್ಮ ಗಂಡ ಧರ್ಮಣ್ಣ
2) ಕೆಂಚಮ್ಮ ತಂದೆ ಧರ್ಮಣ್ಣ
3) ರಾಜಾ ತಂದೆ ಧರ್ಮಣ್ಣ,
ಅರ್ಜಿದಾರರ ವಾಸ: ಆನೆಗೊಂದಿ ಗ್ರಾಮ, ತಾ: ಗಂಗಾವತಿ.

**ಪ್ರತಿವಾದಿಗಳು:**

1) ಬಿ. ವೆಂಕಟರೆಡ್ಡಿ ತಂದೆ ರವಿರೆಡ್ಡಿ,
ಗುತ್ತಿಗೆದಾರರು, ಜುಬಲಿಹಿಲ್ಸ್, ಹೈದರಾಬಾದ್.
2) ಎಕ್ಸಿಕ್ಯೂಟಿವ್ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ಧರ್ಮಣ್ಣ ತಂದೆ ಡಿ. ತಿಮ್ಮಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಧರ್ಮಣ್ಣ ಇವರ ವಾರಸುದಾರರಾದ ಶ್ರೀ/ಶ್ರೀಮತಿ (1) ಈರಮ್ಮ (2) ಕೆಂಚಮ್ಮ (3) ರಾಜಾ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲಾ, ಕೊಪ್ಪಳ.

ಪಿ.ಆರ್.1703

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕಟಣೆ**

**ಕಾಅಕೊ/ಕಾನಪ/ಮ.ಪ್ರ/ಸಂಖ್ಯೆ:75/ 2009, ದಿನಾಂಕ:15.09.2009**

**ಅರ್ಜಿದಾರರು:**

ಶ್ರೀಮತಿ ಮಲ್ಲಮ್ಮ ಗಂಡ ಸೋಮಪ್ಪ,
ಮನೆ ಕೆಲಸ, ಸಾ: ವೆಂಕಟಾಪುರ

**ಪ್ರತಿವಾದಿಗಳು:**

1) ಬಿ. ವೆಂಕಟರೆಡ್ಡಿ ತಂದೆ ರವಿರೆಡ್ಡಿ,
ಗುತ್ತಿಗೆದಾರರು, ಜುಬಲಿಹಿಲ್ಸ್, ಹೈದರಾಬಾದ್.
2) ಎಕ್ಸಿಕ್ಯೂಟಿವ್ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಪಿ.ಡಬ್ಲ್ಯೂ.ಡಿ.) ಕೊಪ್ಪಳ.

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ/ಶ್ರೀಮತಿ ಹುಲುಗೇಶ್ ತಂದೆ ಸೋಮಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ ದಿನಾಂಕ:22.01.2009 ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ ಹುಲುಗೇಶ್ ಇವರ ವಾರಸುದಾರರಾದ ಶ್ರೀ/ಶ್ರೀಮತಿ ಮಲ್ಲಮ್ಮ ಗಂಡ ಸೋಮಪ್ಪ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದ ಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನೇ ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

ಜಿಲ್ಲಾ ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಕೊಪ್ಪಳ ಜಿಲ್ಲಾ, ಕೊಪ್ಪಳ.

ಪಿ.ಆರ್.1704

## ಕೃಷಿ ಮಾರಾಟ ಇಲಾಖೆ

## ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309

## ಅಧಿಸೂಚನೆ ಸಂ:ಕೃಮಾಇ/190/ನಿಯವಿ/2008, ಬೆಂಗಳೂರು, ದಿನಾಂಕ:08–11–2010

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 145(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಅಧಿಸೂಚನೆ ಸಂ:ಸಇ/331/ಎಂಆರ್‌ಇ(1)/2008, ದಿನಾಂಕ:31.07.2010 ರ ಮೂಲಕ ಬಾಗಲಕೋಟೆ ತಾಲ್ಲೂಕು ಒಳಗೊಂಡ ಬಾಗಲಕೋಟೆ ಮಾರುಕಟ್ಟೆ ಕ್ಷೇತ್ರಕ್ಕೆ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯನ್ನು ಸ್ಥಾಪಿಸಿದೆ.

ಮತ್ತು ಆ ಕಾರಣ, ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿನ ವಿಧಾನವನ್ನು ಅನುಸರಿಸಿ ಅಧಿಸೂಚನೆ ಸಂ (1) ಕೃಮಾಇ/85/ನಿಯವಿ/2001, ದಿನಾಂಕ:08.08.2002 (2) ಎಂಡಿ–ಇಎಂ–ಸಿಆರ್–554–ಆರ್ ಅಂಡ್ ಇ–77–78, ದಿಆಂಕ:15.03.1978 ನ್ನು ಮಾರ್ಪಡಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ನಿರ್ದೇಶಕನಾಗಿರುವ ಜಿ.ರಾಮಚಂದ್ರ ಆದ ನಾನು, ಬಾಗಲಕೋಟೆ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿಸಲ್ಪಟ್ಟ ಈ ಕೆಳಗೆ ನಮೂದಿಸಿದ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಬಾಗಲಕೋಟೆ ನಗರಸಭೆ ಪರಿಮಿತಿಯೊಳಗಿನ ಪ್ರದೇಶ ಮತ್ತು ಮುಚಖಂಡಿ ಗ್ರಾಮದ ಪರಿಮಿತಿಯೊಳಗಿನ ಪ್ರದೇಶವನ್ನು **"ಮಾರುಕಟ್ಟೆ"**ಎಂದು ಮತ್ತು ಮಾರುಕಟ್ಟೆ ಸಮಿತಿಯು ಸ್ವಾಧೀನಪಡಿಸಿಕೊಂಡಿರುವ ಈ ಕೆಳಗಿನ ಅನುಸೂಚಿ ಎ ಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು **"ಮಾರುಕಟ್ಟೆ ಪ್ರಾಂಗಣ"** ಎಂದು ಮತ್ತು ಕಲಾದಗಿ ಟೌನ್ ಪಂಚಾಯಿತಿ ಪರಿಮಿತಿಯೊಳಗಿನ ಪ್ರದೇಶವನ್ನು **"ಉಪ ಮಾರುಕಟ್ಟೆ"** ಎಂದು ಹಾಗೂ ಅನುಸೂಚಿ ಬಿ ಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು **"ಉಪ ಮಾರುಕಟ್ಟೆ ಪ್ರಾಂಗಣ"**ವೆಂದು ಈ ಮೂಲಕ ಘೋಷಿಸಿದ್ದೇನೆ.

### ಕೃಷಿ ಉತ್ಪನ್ನಗಳು

1.ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ಬೀಟೆ (ರೋಸ್‌ವುಡ್), 90.ಬಿಲ್ವಾಲ, 91.ಗಂಜಾನ್, 92.ಹಡಗ, 93.ಹಳದಿ, 94.ಹನಿಮತ್ತಲ್, 95.ಹೊನ್ನೆ, 96.ಐಯಾನಿ, 97.ಹಲಸಿನಮರ, 98.ಜಂಬೆ, 99.ಕಲನ್, 100.ಕಿಂಡಲ್, 101.ಮಾವಿನಮರ, 102.ಮತ್ತಿ, 103.ನಂದಿ, 104.ರಾಂಪತ್ರೆ, 105.ತೇಗ (ಸಾಗವಾನಿ), 106.ಬಿಳಿ ದೇವದಾರು (ಕೇದರ), 107.ಸಿಲ್ವರ್ ಓಕ್, 108.ನೀಲಗಿರಿ, 109.ವೀಳ್ಯೆದೆಲೆ, 110.ಬೆಲ್ಲ, 111.ತೆಂಗಿನಕಡ್ಡಿ, 112.ಒಣದ್ರಾಕ್ಷಿ.

### ಅನುಸೂಚಿ–ಎ

ಬಾಗಲಕೋಟೆ ತಾಲ್ಲೂಕಿನ ಮುಚಖಂಡಿ ಗ್ರಾಮದ ಪರಿಮಿತಿಯೊಳಗಿನ ನೋಂದಣಿ ಸಂಖ್ಯೆ: 129, 131, 132:1, 132:2, 132:3, 134, 142, 142:1, 142:2ಎ, 142:ಬಿ, 143:1, 143:2, 143:3, 128, 133 ಮತ್ತು ಬಾಗಲಕೋಟೆ ನಗರಾಭಿವೃದ್ಧಿ ಪ್ರಾಧಿಕಾರದವರ ಪ್ರಕಾರ ಹೊಂದಿಕೊಂಡ 13 ಎಕರೆ ಜಮಿನು ಸೇರಿ ಒಟ್ಟು 104 ಎಕರೆ 15 ಗುಂಟೆಗಳ ಈ ಕೆಳಗಿನ ಸೀಮಾಬದ್ಧ ಸ್ಥಳ:–

ಪೂರ್ವಕ್ಕೆ : ರಿಸರ್ವ್ ಸರ್ವೆ ನಂ.169, 171, 173, 175, 176, 177, 179, 180
ಪಶ್ಚಿಮಕ್ಕೆ : ರಿಸರ್ವ್ ಸರ್ವೆ ನಂ.126, 127, 128, 135, 141, 144
ಉತ್ತರಕ್ಕೆ : ರಾಜ್ಯ ಹೆದ್ದಾರಿ ಹಾಗೂ ಕೃಷಿ ಇಲಾಖೆ ಕಛೇರಿ ಕಟ್ಟಡಗಳು
ದಕ್ಷಿಣಕ್ಕೆ : ರಿಸರ್ವ್ ಸರ್ವೆ ನಂ.145, 146.

### ಅನುಸೂಚಿ–ಬಿ

ಕಲಾದಗಿ ಟೌನ್ ಪಂಚಾಯಿತಿ ಪರಿಮಿತಿಯೊಳಗೆ ಇರುವ ಜಾನುವಾರು ಸಂತೆ ಮತ್ತು ಅಡತ್ ಬಜಾರ್ ಒಳಗೊಂಡ ಈ ಕೆಳಗಿನ ಸೀಮಾಬದ್ಧ ಸ್ಥಳ:–

ಪೂರ್ವಕ್ಕೆ : ತುಳಸಿಗೇರಿ ತೊರೆ
ಪಶ್ಚಿಮಕ್ಕೆ : ಜುಮ್ಮಾಮಸೀದಿ ರಸ್ತೆ
ಉತ್ತರಕ್ಕೆ : ಬಾಗಲಕೋಟೆ ಬೆಳಗಾವಿ ರಸ್ತೆ
ದಕ್ಷಿಣಕ್ಕೆ : ಸವಾಯಿ ಕಟ್ಟೆ ರಸ್ತೆ

**ಜಿ. ರಾಮಚಂದ್ರ**
ನಿರ್ದೇಶಕರು.

ಪಿ.ಆರ್.1610

**ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ಶಿವಮೊಗ್ಗ ವಿಭಾಗ, ಶಿವಮೊಗ್ಗ**
**ಸಂಖ್ಯೆ:ಎ3:71ಎ:ಎಆರ್‌ಎಲ್ 71/2002–03, ದಿನಾಂಕ:25ನೇ ಸೆಪ್ಟೆಂಬರ್, 2010**

**ಉಪಸ್ಥಿತರು:** ಶ್ರೀ ಎಸ್ ವೆಂಕಟೇಸನ್ ಭಾ.ಅ.ಸೇ ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವಿಭಾಗ ಶಿವಮೊಗ್ಗ

**ಫಿರ್ಯಾದಿ :** ವಲಯ ಅರಣ್ಯಾಧಿಕಾರಿ, ರಿಪ್ಪನ್‌ಪೇಟೆ ವಲಯ, ಅರಸಾಳು. (ಸಹಾಯಕ ಅಭಿಯೋಗ ನಿರ್ದೇಶಕರು ಇವರ ಮುಖಾಂತರ)

**V/s**

**ಆರೋಪಿತರು :** ಗೊತ್ತಿಲ್ಲ.

**ಅರ್ಜಿದಾರರು :** ಶ್ರೀ ಎಂ ಬಿ ಮಂಜುನಾಥ ಬಿನ್ ಎನ್ ಎಂ ಬೈರೇಗೌಡ ರಿಪ್ಪನ್‌ಪೇಟೆ (ಶ್ರೀಮತಿ ಪ್ರಮೀಳ ಎಲ್ ಗೌಡ ಇವರ ಜಿಪಿಎ) (ಶ್ರೀ ಎ.ಟಿ. ಬೆಳ್ಳಿಯಪ್ಪ ವಕೀಲರು)

**ಪ್ರಕರಣದ ಸಂಕ್ಷಿಪ್ತ ವಿವರ:**

ದಿನಾಂಕ:26–09–1995 ರಂದು ವಲಯ ಅರಣ್ಯಾಧಿಕಾರಿ, ರಿಪ್ಪನ್ ಪೇಟೆ ವಲಯ, ಅರಸಾಳು ಇವರ ಕಚೇರಿ ಸಿಬ್ಬಂದಿಗಳು ವರ್ತಮಾನದ ಮೇರೆಗೆ ರಾತ್ರಿ ಸುಮಾರು 07–30 ರ ಸಮಯದಲ್ಲಿ ಮಸರೂರು ಮನ್ನಾ ಜಂಗಲಿಯ 1940ನೇ ಸಾಲಿನ ನೆಡುತೋಪಿನಲ್ಲಿ ಕಾಯುತ್ತಿದ್ದಾಗ ರಾತ್ರಿ 8–45 ರ ಹೊತ್ತಿಗೆ ಒಂದು ವಾಹನ ಬಂದಿದ್ದು, ಅದರಿಂದ ಕೆಲವು ಜನರು ಇಳಿದು ಸ್ವಲ್ಪ ದೂರದಲ್ಲಿದ್ದ ತುಂಡುಗಳನ್ನು ವಾಹನದಲ್ಲಿ ತುಂಬಿದರು, ಮತ್ತು ವಾಹನ ಹತ್ತಿ ಹೊರಡಲು ಅನುವಾದರು. ಆಗ ವಲಯ ಕಚೇರಿ ಸಿಬ್ಬಂದಿಗಳು ವಾಹನವನ್ನು ಸುತ್ತುವರಿದರು ಆದರೆ ಆಸಾಮಿಗಳು ಓಡಿಹೋಗಿರುತ್ತಾರೆ. ಆಗ ವಲಯ ಕಚೇರಿ ಸಿಬ್ಬಂದಿಗಳು ವಾಹನವನ್ನು ಸುತ್ತುವರಿದರು ಆದರೆ ಆಸಾಮಿಗಳು ಓಡಿಹೋಗಿರುತ್ತಾರೆ. ಆಗ ವಲಯ ಕಚೇರಿ ಸಿಬ್ಬಂದಿಗಳು ಗಾಳಿಯಲ್ಲಿ ಗುಂಡು ಹಾರಿಸಿ ಓಡಿಹೋದ ಆಸಾಮಿಗಳನ್ನು ಹಿಡಿಯಲು ಬೆನ್ನಟ್ಟಿದರೂ ಪ್ರಯೋಜನವಾಗಿರುವುದಿಲ್ಲ. ನಂತರ ವಾಹನ ತಡೆದು ತಪಾಸಣೆ ಮಾಡಿದಾಗ ಅದು ಮಿಸ್ಟುಬಿಷಿ ಕ್ಯಾಂಟರ್ ಕೆಎ 15–310 ಆಗಿದ್ದು, ಅದರಲ್ಲಿ ಸುಮಾರು 09 ಸಾಗುವಾನಿ=0.862 ಎಂ3 ಇದ್ದಿತು. ಇವುಗಳನ್ನು ಕಾನೂನಿಗೆ ವಿರುದ್ಧವಾಗಿ ಸಾಗಾಟ ಮಾಡುತ್ತಿದ್ದರಿಂದ ಪಂಚರ ಸಮಕ್ಷಮದಲ್ಲಿ ಅವುಗಳನ್ನು ಜಪ್ತು ಮಾಡಿರುವುದಾಗಿ ಮಹಜರು ಜರುಗಿಸಿ ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವಿಭಾಗ ಶಿವಮೊಗ್ಗ ಇವರಿಗೆ ವರದಿ ಮಾಡಿರುತ್ತಾರೆ. ಹಾಗೂ ವಾಹನದ ಮುಟ್ಟುಗೋಲಿಗೆ ಸಂಬಂಧಪಟ್ಟಂತೆ ಕ್ರಮ ಕೈಗೊಳ್ಳಲೂ ಸಹ ವರದಿ ಮಾಡಿರುತ್ತಾರೆ.

ಅದರಂತೆ ವಾಹನದ ವಿರುದ್ಧ ಕರ್ನಾಟಕ ಅರಣ್ಯ ಕಾನೂನು ಕಲಂ 71 (ಎ) ರಡಿಯಲ್ಲಿ ಕ್ರಮ ಕೈಗೊಳ್ಳುವ ಕುರಿತು ವಾಹನದ B Extract ಪಡೆದು ಶ್ರೀ ಎಂ ಬಿ ಮಂಜುನಾಥ ಬಿನ್ ಎನ್ ಎಂ ಬೈರೇಗೌಡ ರಿಪ್ಪನ್ಪೇಟೆ (ಶ್ರೀಮತಿ ಪ್ರಮೀಳ ಎಲ್ ಗೌಡ ಇವರ ಜಿ ಪಿ ಎ) ಇವರಿಗೆ ಕ.ಅ.ಕಾ ಕಲಂ 71 (ಬಿ) ರ ಪ್ರಕಾರ ಕಾರಣ ಕೇಳುವ ನೋಟೀಸನ್ನು ದಿನಾಂಕ 05–12–1995 ರಂದು ಜಾರಿ ಮಾಡಿದ್ದು, ಅದಕ್ಕೆ ಶ್ರೀಮತಿ ಪ್ರಮೀಳ ಎಲ್ ಗೌಡ ಇವರು ಅವರ ವಕೀಲರ ಮೂಲಕ ಉತ್ತರ ನೀಡಿ ತಾನು ಒಬ್ಬ ಮಹಿಳೆಯಾಗಿದ್ದು, ಒಂದು ದಿನಸಿ ಅಂಗಡಿ ನಡೆಸುತ್ತಿದ್ದೇನೆ. ಅದಕ್ಕಾಗಿ ಈ ವಾಹನವನ್ನು ಉಪಯೋಗಿಸುತ್ತಿದ್ದೇನೆ. ಅಕ್ರಮ ಸಾಗಾಣಿಕೆಯಾಗುವ ಸಮಯದಲ್ಲಿ ತಾನು ವಾಹನದಲ್ಲಿರಲಿಲ್ಲ. ಅಕ್ರಮ ಸಾಗಾಣಿಕೆಗೆ ತನ್ನ ಸಮ್ಮತಿ ಅಥವಾ ಪರೋಕ್ಷ ಸಮ್ಮತಿ ಇರುವುದಿಲ್ಲ. ಅಕ್ರಮ ಸಾಗಾಣಿಕೆ ಬಗ್ಗೆ ತನಗೇನೂ ಗೊತ್ತಿಲ್ಲ ಎಂದು ತಿಳಿಸಿರುತ್ತಾರೆ.

ನಂತರ ಈ ಪ್ರಕರಣವನ್ನು ವಿಚಾರಣೆಗೆ ಎತ್ತಿಕೊಳ್ಳಲಾಯಿತು. ಅಭಿಯೋಜನಾ ಪರವಾಗಿ 02 ಸಾಕ್ಷಿದಾರರನ್ನು ವಿಚಾರಣೆ ಮಾಡಲಾಗಿದೆ. ನಿಶಾನೆ ಪಿ–1ರಿಂದ 5 ಹಾಗೂ ಮುದ್ದೆ ಮಾಲು 1 ರಿಂದ 10 ಇವುಗಳನ್ನು ಗುರುತಿಸಲಾಗಿದೆ. ಎದುರುದಾರರ ಪರವಾಗಿ ಒಬ್ಬರನ್ನು ವಿಚಾರಣೆ ಮಾಡಲಾಯಿತು.

ಈ ಪ್ರಕರಣದಲ್ಲಿ ಸಾಕ್ಷಿದಾರರ ಹೇಳಿಕೆ ಹಾಗೂ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಎರಡೂ ಕಡೆಯ ವಾದ ವಿವಾದಗಳನ್ನು ಆಲಿಸಲಾಗಿದೆ.

**ಈ ಕೆಳಗಿನ ವಿವಾದಾಂಶಗಳು ಉದ್ಭವಿಸುತ್ತವೆ :–**

1) ವಾಹನ ಸಂಖ್ಯೆ: ಮಿಸ್ಟುಬಿಷಿ ಕ್ಯಾಂಟರ್ ಕೆ ಎ 15–310 ಇದನ್ನು ಕಾನೂನಿಗೆ ವಿರುದ್ಧವಾಗಿ ದಿನಾಂಕ:26–09–1995 ರಂದು ಸುಮಾರು 09 ಸಾಗುವಾನಿ=0.862 ಎಂ3 ನಾಟಾ ಸಾಗಾಟ ಮಾಡಲು ಉಪಯೋಗಿಸಿದ ವಿಷಯವನ್ನು ಅಭಿಯೋಜನೆಯವರು ರುಜುವಾತು ಮಾಡುತ್ತಾರೆಯೇ?

2) ಈ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನವನ್ನು ಕಾನೂನಿಗೆ ವಿರುದ್ಧವಾಗಿ ಸಾಗುವಾನಿ ನಾಟಾ ಸಾಗಾಟ ಮಾಡದಂತೆ ತಡೆಯಲು ಎಲ್ಲಾ ರೀತಿಯ ಮುನ್ನೆಚ್ಚರಿಕೆ ಕ್ರಮವನ್ನು ಈ ವಾಹನದ ಮಾಲೀಕರು, ಅವರ ಪ್ರತಿನಿಧಿಗಳು ಇಲ್ಲವೇ ಜಪ್ತು ಮಾಡುವ ಸಮಯದಲ್ಲಿ ವಾಹನದ ಸ್ವಾಧೀನ ಹೊಂದಿದ್ದ ವ್ಯಕ್ತಿಗಳು ತೆಗೆದುಕೊಂಡಿದ್ದರೋ ಹೇಗೆ?

3) ಜಪ್ತು ಮಾಡಿದ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆಯೋ ಹೇಗೆ?

4) ಏನು ಆದೇಶ ಮಾಡಬಹುದಾಗಿದೆ?

ಈ ಮೇಲಿನ ವಿವಾದಾಂಶಗಳಿಗೆ ನಾನು ಕೆಳಗಿನಂತೆ ಉತ್ತರಿಸುತ್ತೇನೆ:–

ವಿವಾದಾಂಶ 1 :– ಸಕಾರಾತ್ಮಕವಾಗಿ

ವಿವಾದಾಂಶ 2 :– ನಕಾರಾತ್ಮಕವಾಗಿ

ವಿವಾದಾಂಶ 3 :– ಸಕಾರಾತ್ಮಕವಾಗಿ

ವಿವಾದಾಂಶ 4 :– ಅಂತಿಮ ಆದೇಶದಂತೆ

**ಕಾರಣಗಳು:–**

**ವಿವಾದಾಂಶ 1:–** ಈ ಪ್ರಕರಣದಲ್ಲಿ ಅಭಿಯೋಜನಾ ಪರವಾಗಿ ವಿಚಾರಣೆ ಮಾಡಿದ ಪಿ.ಡಬ್ಲ್ಯೂ – 1 ಶ್ರೀ ಹೆಚ್ ಮಂಜಪ್ಪ ವಲಯ ಅರಣ್ಯಾಧಿಕಾರಿ, ಇವರು ತಮ್ಮ ಹೇಳಿಕೆಯಲ್ಲಿ ದಿನಾಂಕ:26–09–1995 ರಂದು ವರ್ತಮಾನ ಬಂದ ಮೇರೆಗೆ ರಾತ್ರಿ ಸುಮಾರು 07–30 ರ ಸಮಯದಲ್ಲಿ ಮಸರೂರು ಮನ್ನಾ ಜಂಗಲಿಯ 1940ನೇ ಸಾಲಿನ ನೆಡುತೋಪಿನಲ್ಲಿ ಕಾಯುತ್ತಿದ್ದಾಗ ರಾತ್ರಿ 8.45 ರ ಹೊತ್ತಿಗೆ ಒಂದು ವಾಹನ ಬಂದಿದ್ದು, ಅದರಿಂದ ಕೆಲವು ಜನರು ಇಳಿದು ಸ್ವಲ್ಪ ದೂರದಲ್ಲಿದ್ದ ತುಂಡುಗಳನ್ನು ವಾಹನದಲ್ಲಿ ತುಂಬಿದರು, ಮತ್ತು ವಾಹನ ಹತ್ತಿ ಹೊರಡಲು ಅನುವಾದರು. ಆಗ ವಲಯ ಕಚೇರಿ ಸಿಬ್ಬಂದಿಗಳು ವಾಹನವನ್ನು ಸುತ್ತುವರಿದರು ಆದರೆ ಆಸಾಮಿಗಳು ಓಡಿಹೋಗಿರುತ್ತಾರೆ. ಆಗ ವಲಯ ಕಚೇರಿ ಸಿಬ್ಬಂದಿಗಳು ಗಾಳಿಯಲ್ಲಿ ಗುಂಡು ಹಾರಿಸಿ ಓಡಿಹೋದ ಆಸಾಮಿಗಳನ್ನು ಹಿಡಿಯಲು ಬೆನ್ನಟ್ಟಿದರೂ ಪ್ರಯೋಜನವಾಗಿರುವುದಿಲ್ಲ. ನಂತರ ವಾಹನ ತಡೆದು ತಪಾಸಣೆ ಮಾಡಿದಾಗ ಅದು ಮಿಸ್ಟುಬಿಷಿ ಕ್ಯಾಂಟರ್ ಕೆ ಎ 15–310 ಆಗಿದ್ದು, ಅದರಲ್ಲಿ ಸುಮಾರು 09 ಸಾಗುವಾನಿ=0.862 ಎಂ3 ಇದ್ದಿತು. ನಂತರ ಆ ರಾತ್ರಿ ಸಮಯದಲ್ಲಿ ಖಾಸಗಿಯವರಾರೂ ಸಿಕ್ಕದಿದ್ದರಿಂದ ಇಲಾಖೆಯವರೇ ಪಂಚರಾಗಿ ಮಹಜರು ಮಾಡುವ ಮೂಲಕ ಈ ವಾಹನವನ್ನು ಹಾಗೂ ಅದರೊಳಗಿದ್ದ ಸಾಗುವಾನಿ ತುಂಡುಗಳನ್ನು ಜಪ್ತು ಮಾಡಲಾಯಿತು. ಕಾನೂನಿಗೆ ಬಾಹಿರವಾಗಿ ಸಾಗುವಾನಿ ತುಂಡುಗಳನ್ನು ಸಾಗಾಟ ಮಾಡಲು ಈ ವಾಹನವನ್ನು ಉಪಯೋಗಿಸಿದ್ದು ಕಂಡು ಬಂದಿದೆ ಎಂದು ಸಾಕ್ಷಿ ನುಡಿದಿರುತ್ತಾರೆ. ಇವರು ಜಪ್ತು ಮಾಡಿದ ಸಾಗುವಾನಿ ತುಂಡುಗಳನ್ನು ಹಾಗೂ ವಾಹನವನ್ನು ಮುದ್ದೆ ಮಾಲು 1 ರಿಂದ 10 ಎಂದು ಗುರುತಿಸಿರುತ್ತಾರೆ. ಈ ಸಾಕ್ಷಿದಾರರಿಗೆ ಅರ್ಜಿದಾರರ ಪರ ಪಾಟಿ ಸವಾಲು ಮಾಡಲಾಗಿದ್ದು, ಪಾಟಿ ಸವಾಲಿನಲ್ಲಿ ಸ್ಥಳದಲ್ಲಿ ಮಹಜರನ್ನು ಬರೆದಿಲ್ಲ ಎಂಬ ಸೂಚನೆಯನ್ನು ಇಟ್ಟಿದ್ದು, ಅದನ್ನು ಇವರು ನಿರಾಕರಿಸಿರುತ್ತಾರೆ. ಈ ಸಾಕ್ಷಿದಾರರ ಹೇಳಿಕೆಯನ್ನು ಹಾಗು ನಿಶಾನೆ ಪಿ 1 ರಲ್ಲಿನ ವಿಷಯವನ್ನು ಗಮನಿಸಿದಾಗ ಮಿಸ್ಟುಬಿಷಿ ಕ್ಯಾಂಟರ್ ಕೆಎ 15–310 ನಂಬರಿನ ವಾಹನದಲ್ಲಿ ಯಾವುದೇ ಪರವಾನಿಗೆ ಹೊಂದದೇ 09 ಸಾಗುವಾನಿ–0.862 ಎಂ3 ನಾಟ ಸಾಗಾಟ ಮಾಡಿರುವ ವಿಷಯ ಪುರಾವೆಯಾಗುತ್ತದೆ. ಈ ಸಾಕ್ಷಿದಾರರ ಹೇಳಿಕೆಯನ್ನು ನಂಬದೇ ಇರಲು ಯಾವುದೇ ಬಲವಾದ ಕಾರಣಗಳು ಇರುವುದಿಲ್ಲ. ಹಾಗೂ ಪಾಟಿ ಸವಾಲಿನಲ್ಲಿ ಕೂಡ ಇವರ ಹೇಳಿಕೆಯನ್ನು ನಂಬದಿರುವಂತಹ ವಿಷಯವನ್ನು ಹೊರಗೆಡವಿದ್ದು ಇರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಮೊದಲನೇ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

**ವಿವಾದಾಂಶ 2:–** ಶ್ರೀ ಎಂ ಬಿ ಮಂಜುನಾಥ ಬಿನ್ ಎನ್ ಎಂ ಬೈರೇಗೌಡ ರಿಪ್ಪನ್ಪೇಟೆ (ಶ್ರೀಮತಿ ಪ್ರಮೀಳ ಎಲ್ ಗೌಡ ಇವರ ಜಿ ಪಿ ಎ) ಇವರಿಗೆ ಕ.ಅ.ಕಾ ಕಲಂ 71 (ಬಿ) ರ ಪ್ರಕಾರ ಕಾರಣ ಕೇಳುವ ನೋಟೀಸನ್ನು ದಿನಾಂಕ 05–12–1995 ರಂದು ಜಾರಿ ಮಾಡಿದ್ದು, ಅದಕ್ಕೆ ಶ್ರೀಮತಿ ಪ್ರಮೀಳ ಎಲ್ ಗೌಡ ಇವರು ಅವರ ವಕೀಲರ ಮೂಲಕ ಉತ್ತರ ನೀಡಿ ಮಿಸ್ಟುಬಿಷಿ ಕ್ಯಾಂಟರ್ ಕೆ ಎ 15–310 ನಂಬರಿನ ವಾಹನದ ನೋಂದಾಯಿತ ಮಾಲೀಕಳಾದ ತಾನು ಒಬ್ಬ ಮಹಿಳೆಯಾಗಿದ್ದು, ಒಂದು ದಿನಸಿ ಅಂಗಡಿ ನಡೆಸುತ್ತಿದ್ದೇನೆ. ಅದಕ್ಕಾಗಿ ಈ ವಾಹನವನ್ನು ಉಪಯೋಗಿಸುತ್ತಿದ್ದೇನೆ. ಅಕ್ರಮ ಸಾಗಾಣಿಕೆಯಾಗುವ ಸಮಯದಲ್ಲಿ ತಾನು ವಾಹನದಲ್ಲಿರಲಿಲ್ಲ. ಅಕ್ರಮ ಸಾಗಾಣಿಕೆಗೆ ತನ್ನ ಸಮ್ಮತಿ ಅಥವಾ ಪರೋಕ್ಷ ಸಮ್ಮತಿ ಇರುವುದಿಲ್ಲ. ಅಕ್ರಮ ಸಾಗಾಣಿಕೆ ಬಗ್ಗೆ ತನಗೇನೂ ಗೊತ್ತಿಲ್ಲ ಎಂದು ತಿಳಿಸಿರುತ್ತಾರೆ. ಶ್ರೀ ಎಂ ಬಿ ಮಂಜುನಾಥ ಬಿನ್ ಎನ್ ಎಂ ಬೈರೇಗೌಡ ರಿಪ್ಪನ್ಪೇಟೆ (ಶ್ರೀಮತಿ ಪ್ರಮೀಳ ಎಲ್ ಗೌಡ ಇವರ ಜಿ ಪಿ ಎ) ಇವರು ತಮ್ಮ ಸಾಕ್ಷಿ ಹೇಳಿಕೆಯಲ್ಲಿ ತಾವು ನೇಮಿಸಿಕೊಂಡಿದ್ದ ವಾಸುದೇವ ಎಂಬ ಹೆಸರಿನ ವಾಹನ ಚಾಲಕ ಅಂದು ರಜಾ ಹೋಗಿದ್ದು, ಬೇರೆ ಯಾರನ್ನೋ ನೇಮಿಸಿದ್ದರು. ಅವರು ಬೆಳಗಿನಿಂದ ಬಾಡಿಗೆ ಹೋಗಿದ್ದು, ನಂತರ ಸಂಜೆ ಭತ್ತದ ಟ್ರಿಪ್ ಎಂದು ತಿಳಿಸಿ ಹೋದ ರಾತ್ರಿ ಬಹಳ ಹೊತ್ತಾದರೂ ಬರಲಿಲ್ಲ. ಅಕ್ರಮ ಸಾಗಾಣಿಕೆ ಬಗ್ಗೆ ತನಗೇನೂ ಗೊತ್ತಿಲ್ಲ. ತಾವು ನಿರಪರಾಧಿ ಎಂದು ತಿಳಿಸಿರುತ್ತಾರೆ. ಆದರೆ ಇದನ್ನು ಸಾಬೀತುಪಡಿಸಲು ಯಾವುದೇ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ. ಈ ಪ್ರಕರಣದಲ್ಲಿ ಕಾನೂನಿಗೆ ವಿರುದ್ಧವಾಗಿ 09 ಸಾಗುವಾನಿ=0.862 ಎಂ3 ನಾಟಾ ತುಂಡುಗಳನ್ನು ಸಾಗಾಟ ಮಾಡಲು ತಮ್ಮ ಮಾಲೀಕತ್ವದ ವಾಹನವನ್ನು ಉಪಯೋಗಿಸಿಕೊಳ್ಳಲು ಇವರು ಅವಕಾಶ ನೀಡಿರಲಿಲ್ಲ ಎಂಬ ಬಗ್ಗೆ ಯಾವುದೇ ಆಧಾರಗಳಿರುವುದಿಲ್ಲ. ಈ ರೀತಿ ಕಾನೂನಿಗೆ ವಿರುದ್ಧವಾಗಿ ನಾಟಾವನ್ನು ತಮ್ಮ ವಾಹನದಲ್ಲಿ ಸಾಗಾಟ ಮಾಡಿದ ವಿಷಯ ತಮ್ಮ ತಿಳುವಳಿಕೆಯಿಂದ ಇಲ್ಲವೇ ತಾವೇ ಉದ್ದೇಶ ಪೂರ್ವಕವಾಗಿ ಒಪ್ಪಿಗೆ ಕೊಟ್ಟಿಲ್ಲ ಎಂಬ ಬಗ್ಗೆ ವಾಹನದ ಮಾಲೀಕರು ಯಾವುದೇ ಸಾಕ್ಷಿ ಪುರಾವೆಗಳನ್ನು ಒದಗಿಸಿರುವುದಿಲ್ಲ. ಅಲ್ಲದೆ ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಈ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನವನ್ನು ಕಾನೂನಿಗೆ ವಿರುದ್ಧವಾಗಿ ಸಾಗುವಾನಿ ತುಂಡುಗಳನ್ನು ಸಾಗಾಟ ಮಾಡಲು ಉಪಯೋಗಿಸಿದ್ದು, ಇದನ್ನು ತಡೆಯಲು ವಾಹನದ ಮಾಲೀಕರು ಯಾವುದೇ ಮುನ್ನೆಚರಿಕೆ ಕ್ರಮವನ್ನು ಕೈಗೊಂಡಿದ್ದು ಕಂಡು ಬರುವುದಿಲ್ಲ ಆದ್ದರಿಂದ ಈ ವಾಹನವನ್ನು ಅಕ್ರಮವಾಗಿ ಸಾಗುವಾನಿ ನಾಟಾ ಸಾಗಾಟಕ್ಕೆ ಉಪಯೋಗಿಸಿರುತ್ತಾರೆ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ. ಈ ಎಲ್ಲಾ ಕಾರಣಗಳಿಂದ ಈ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬೇಕಾಗುತ್ತದೆ. ಕಾರಣ 2 ನೇ ವಿವಾದಾಂಶವನ್ನು ನಕಾರಾತ್ಮಕವಾಗಿ ಉತ್ತರಿಸಲಾಗಿದೆ.

**ವಿವಾದಾಂಶ 3:–** ಮೇಲೆ ವಿವರಿಸಿದಂತೆ ಈ ಪ್ರಕರಣದಲ್ಲಿ ಜಪ್ತಾದ ಐಷರ್ ಮಿಸ್ಟುಬಿಷಿ ಕ್ಯಾಂಟರ್ ಕೆ ಎ 15–310 ನಂಬರಿನ ವಾಹನವನ್ನು ಕಾನೂನಿಗೆ ವಿರುದ್ಧವಾಗಿ ಸುಮಾರು 09 ಸಾಗುವಾನಿ=0.862 ಎಂ3 ನಾಟಾ ಸಾಗಾಟ ಮಾಡಲು ಉಪಯೋಗಿಸಿರುವುದು ಕಂಡು ಬಂದಿರುತ್ತದೆ. ಹಾಗೂ ವಾಹನದ ಸುಪರ್ದಿಯನ್ನು ಹೊಂದಿದ್ದ ವ್ಯಕ್ತಿಗಳು ಆ ರೀತಿ ವಾಹನವನ್ನು ಅರಣ್ಯ ಅಪರಾಧಕ್ಕೆ ಬಳಸದಂತೆ ಯಾವುದೇ ಕ್ರಮ ಕೈಗೊಂಡಿದ್ದು ಕಂಡು ಬಂದಿರುವುದಿಲ್ಲ. ವಾಹನದ ಮಾಲೀಕರು ತಮ್ಮ ಪರವಾಗಿ ಯಾವುದೇ ಸಾಕ್ಷಿ ಪುರಾವೆಗಳನ್ನು ಒದಗಿಸಲು ವಿಫಲರಾದ್ದರಿಂದ ಈ ವಿವಾದಾಂಶವನ್ನು ಸಕಾರಾತ್ಮಕವಾಗಿ ಉತ್ತರಿಸಲಾಗಿದೆ.

**ವಿವಾದಾಂಶ 4:–** ಈ ಮೇಲೆ ಕಾಣಿಸಿದ ಎಲ್ಲಾ ಕಾರಣಗಳಿಂದ ಈ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನವನ್ನು ವಾಹನದ ಮಾಲೀಕರ ಮತ್ತು ಚಾಲಕರ ತಿಳಿವಳಿಕೆಯಿಂದ ಕಾನೂನಿಗೆ ವಿರುದ್ಧವಾಗಿ 09 ಸಾಗುವಾನಿ=0.862 ಎಂ3 ನಾಟಾ ಸಾಗಾಟ ಮಾಡಲು ಉಪಯೋಗಿಸಿದ್ದಾಗಿ ರುಜುವಾತು ಆಗಿರುವುದರಿಂದ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಆದೇಶ**

ಎಸ್ ವೆಂಕಟೇಸನ್ ಭಾ.ಅ.ಸೇ ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಶಿವಮೊಗ್ಗ ವಿಭಾಗ ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ ಕಲಂ 71 ಎ ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಪ್ರಕರಣದಲ್ಲಿ ಎಲ್ಲಾ ವಿಧಿ ವಿಧಾನಗಳನ್ನು ಅನುಸರಿಸಿದ ನಂತರ ಈ ಕೆಳಗಿನಂತೆ ಆದೇಶ ಮಾಡಿರುತ್ತೇನೆ:.

ರಿಪ್ಪನ್ ಪೇಟೆ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ 71/95–96 ರಲ್ಲಿ ಜಪ್ತು ಮಾಡಿದ ಐಷರ್ ಮಿಸ್ಟುಬಿಷಿ ಕ್ಯಾಂಟರ್ ಕೆ ಎ 15–310 ನಂಬರಿನ ವಾಹನವನ್ನು ಹಾಗೂ 09 ಸಾಗುವಾನಿ=0.862 ಎಂ3 ನಾಟಾವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

**ಎಸ್. ವೆಂಕಟೇಸನ್,** ಭಾ.ಅ.ಸೇ
ಪ್ರಾಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಶಿವಮೊಗ್ಗ. ವಿಭಾಗ ಶಿವಮೊಗ್ಗ

ಶಿವಮೊಗ್ಗ
ದಿನಾಂಕ: 25–09–2010

**ಅನುಬಂಧ:**

**ಅಭಿಯೋಜನಾ ಪರ ವಿಚಾರಣೆ ಮಾಡಿದ ಸಾಕ್ಷಿದಾರರು.**

ಪಿ.ಡಬ್ಲ್ಯೂ – 1 ಶ್ರೀ ಮಂಜಪ್ಪ ವಲಯ ಅರಣ್ಯಾಧಿಕಾರಿ,
ಪಿ.ಡಬ್ಲ್ಯೂ – 2 ಶ್ರೀ ನಂಜುಂಡಯ್ಯ ವನಪಾಲಕ

**ನಿಶಾನೆಗೊಳಿಸಿದ ದಾಖಲಾತಿಗಳು :–**

ನಿಶಾನೆ ಪಿ 1 :– ಮಹಜರ್ ಪಿ1 ಎ ಸಹಿ
ನಿಶಾನೆ ಪಿ2 Seizure Report: ಜಪ್ತು ಮಹಜರ್
ನಿಶಾನೆ ಪಿ3 :– ಪ್ರಥಮ ಮಾಹಿತಿ ವರದಿ ಪಿ3 ಎ ಸಹಿ
ನಿಶಾನೆ ಪಿ4 :– ವಿಚಾರಣಾ ವರದಿ ಪಿ4 ಎ ಸಹಿ
ನಿಶಾನೆ ಪಿ5 :– ವಲಯ ಅರಣ್ಯಾಧಿಕಾರಿಗಳ ಪತ್ರ ಪಿ5 ಎ ಸಹಿ
ಮುದ್ದೆಮಾಲು : 1 :– 01 ರಿಂದ 09 ಸಾಗುವಾನಿ ತುಂಡುಗಳು
ಎಂ ಒ 10 :– ವಾಹನ ಐಷರ್ ಮಿಸ್ಟುಬಿಷಿ ಕ್ಯಾಂಟರ್ ಕೆ ಎ 15–310
ವಾಹನದ ಮಾಲೀಕರ ಪರ ಸಾಕ್ಷಿದಾರರು ಪಿ.ಡಬ್ಲ್ಯೂ 1 ಮಂಜುನಾಥ

**ಎಸ್. ವೆಂಕಟೇಸನ್,** ಭಾ.ಅ.ಸೇ
ಪ್ರಾಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಶಿವಮೊಗ್ಗ. ವಿಭಾಗ ಶಿವಮೊಗ್ಗ

ಶಿವಮೊಗ್ಗ
ದಿನಾಂಕ: 25–09–2010
ಪಿಆರ್–1487

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಡಿಟಿಸಿಆರ್:120/2010–11, ದಿನಾಂಕ:23ನೇ ಅಕ್ಟೋಬರ್, 2010**

**ಆರಕ್ಷಕ ಉಪ ನಿರೀಕ್ಷಕರು, ಅರಕೆರೆ ಪೋಲೀಸ್ ಠಾಣೆ, ಶ್ರೀರಂಗಪಟ್ಟಣ ತಾಲ್ಲೂಕು ಇವರ ಅಪರಾಧ ಸಂಖ್ಯೆ:77/2009, ದಿನಾಂಕ:26–04–2009**

**ಉಪಸ್ಥಿತರು:** ಜೆ.ಎನ್. ಸೋಮೇಶ್ವರ್,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಆರಕ್ಷಕ ಉಪ ನಿರೀಕ್ಷಕರು, ಅರಕೆರೆ ಪೋಲೀಸ್ ಠಾಣೆ, ಶ್ರೀರಂಗಪಟ್ಟಣ ತಾಲ್ಲೂಕು. | ಶಂಕರ್ ಬಿನ್ ಲೇಟ್ ವೆಂಕಟಯ್ಯ, 40 ವರ್ಷ, ಪರಿಶಿಷ್ಠರ ಜನಾಂಗ, ಹಲಗಯ್ಯನ ಹುಂಡಿ ಗ್ರಾಮ, ವರುಣನ ಹೋಬಳಿ, ಮೈಸೂರು ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:26–04–2009 ರಂದು ಸಾಯಂಕಾಲ 07–15 ರ ಸಮಯದಲ್ಲಿ ಶ್ರೀರಂಗಪಟ್ಟಣ ತಾಲ್ಲೂಕು ಅರಕೆರೆ ಹೋಬಳಿ ಶಾಂತಿಕೊಪ್ಪಲು ಗ್ರಾಮದ ಚೆಕ್‌ಪೋಸ್ಟ್‌ನಲ್ಲಿ ಅಕ್ರಮವಾಗಿ 7.200 ಲೀ ಮದ್ಯವನ್ನು ಒಂದು ಹಳೆಯ ಸೈಕಲ್‌ನಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಪಿರ್ಯಾದುದಾರರು, ಇದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 34 ರ ರೀತ್ಯಾ ಅಪರಾಧವಾದ್ದರಿಂದ ಮೇಲ್ಕಂಡ ಮದ್ಯ ಮತ್ತು ಸೈಕಲ್‌ನ್ನು ಪಂಚನಾಮೆಯಡಿಯಲ್ಲಿ ಅಮಾನತ್ತುಪಡಿಸಿಕೊಂಡು ಅಪರಾಧ ಸಂಖ್ಯೆ:77/2009 ರಂತೆ ಮೊಕದ್ದಮೆಯನ್ನು ದಾಖಲು ಮಾಡಿ ವಶಪಡಿಸಿಕೊಂಡಿರುವ ವಸ್ತುಗಳನ್ನು ಅಬಕಾರಿ ನಿರೀಕ್ಷಕರು, ಶ್ರೀರಂಗಪಟ್ಟಣ ವಲಯ, ಶ್ರೀರಂಗಪಟ್ಟಣ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿ ಮದ್ಯ ಹಾಗೂ ಸೈಕಲ್‌ನ್ನು ತಮ್ಮದೆಂದು ಯಾರು ಹಕ್ಕು ಚಲಾಯಿಸಿರುವುದಿಲ್ಲವಾದ್ದರಿಂದ ಮೇಲ್ಕಂಡ ಮದ್ಯ ಮತ್ತು ಸೈಕಲ್‌ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:04–09–2010ರ ಪತ್ರದ ಮೂಲಕ ಕೋರಿರುತ್ತಾರೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಸೈಕಲ್‌ನಲ್ಲಿ ದಿನಾಂಕ:26–04–2009 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುತ್ತದೆ. ಅಲ್ಲದೇ ಜಪ್ತುಪಡಿಸಿರುವ ಮದ್ಯ ಮತ್ತು ಸೈಕಲ್‌ನ್ನು ತನ್ನದೆಂದು ಕೋರಿ ಈವರೆವಿಗೂ ಪ್ರಾಧಿಕಾರದ ಮುಂದೆ ಯಾರು ಹಾಜರಾಗದೇ ಇರುವ ಹಿನ್ನೆಲೆಯಲ್ಲಿ ಸೈಕಲ್‌ನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ಮದ್ಯ ಮತ್ತು ಸೈಕಲ್‌ನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/120/2010–11, ದಿನಾಂಕ:23–10–2010**

ಜೆ.ಎನ್. ಸೋಮೇಶ್ವರ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಅರಕೆರೆ ಪೋಲೀಸ್ ಠಾಣೆ, ಶ್ರೀರಂಗಪಟ್ಟಣ ತಾಲ್ಲೂಕು ಇವರ ಅಪರಾಧ ಸಂಖ್ಯೆ:77/2009, ದಿನಾಂಕ:26–04–2009 ರ ಪ್ರಕರಣದಲ್ಲಿ ಜಪ್ತುಪಡಿಸಿರುವ 7.200 ಲೀ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ), ಒಂದು ಹಳೆಯ ಸೈಕಲ್ ಮತ್ತು ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಅಕ್ಟೋಬರ್ ತಿಂಗಳ 23 ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿಆರ್–1555

**DEPARTMENT OF COMMERCIAL TAXES**

**Office of the Commissioner of Commercial Taxes (Karnataka), Bangalore**

**No. KSA/CR-60/2010-11, Bangalore, dated:30th September 2010**

**NOTIFICATION-I**

In exercise of the powers under the first proviso to sub-section (1) of Section 35 of the Karnataka Value Added Tax Act, 2003, it is hereby notified with immediate effect that for the tax period of the month ending on 30th September, 2010 and for subsequent months, every dealer registered under the said Act and opting to pay tax by way of composition under clause (b) or (d) of sub-section (1) of Section 15 of the said Act, may submit the return in Form VAT 120 electronically through internet on or before the 15th day of the succeeding month in the following manner.

(1) Every such dealer shall obtain his 'user name' and 'password' from the jurisdictional Local VAT Officer (LVO) or VAT Sub-Officer (VSO), if not already communicated to him by the jurisdictional LVO or VSO.

(2) Every such dealer shall log on to the website http://vat.kar.nic.in/ with the 'user name' and 'password' communicated to him by the LVO or VSO and proceed to submit the return in Form VAT 120 electronically, following the instructions and procedure contained in the said website.

(3) Every such dealer shall enter in the website specified above the particulars of any statutory form required to be filed along with any return submitted in the website specified above and also file the statutory form in the officer of the LVO or VSO, following the instructions contained in the website.

(4) Every such dealer shall file to the LVO or VSO concerned a duly signed hard copy of the consolidated statement of all such electronically submitted monthly returns for the period from April to September and October to March of every financial year, downloaded from the website http://vat.kar.nic.in/, within thirty days after the close of the corresponding period of six months.

**PRADEEP SINGH KHAROLA**

Commissioner of Commercial Taxes (Karnataka), Bangalore

**DEPARTMENT OF COMMERCIAL TAXES**

**Office of the Commissioner of Commercial Taxes (Karnataka), Bangalore**

**No. KSA/CR-60/2010-11, dated:30th September 2010**

**NOTIFICATION-II**

In exercise of the powers under the first proviso to sub-section (1) of Section 35 of the Karnataka Value Added Tax Act, 2003, it is hereby notified with immediate effect that commencing from the quarter ending on 30th September, 2010 or the month, as the case may be, and for subsequent periods, every dealer paying tax under sub-section (4) or (5) of Section 4 apart from any tax under sub-section (1) of the said Section may submit for the quarter or month, return in Form VAT 105 electronically through internet on or before the 15th day of the month following the relevant quarter or 20th day of the succeeding month, in the following manner:

(1) Every such dealer shall obtain his 'user name' and 'password' from the jurisdictional Local VAT Officer (LVO) or VAT Sub-Officer (VSO), if not already communicated to him by the jurisdictional LVO or VSO.

(2) Every such dealer shall log on to the website http://vat.kar.nic.in/, with the 'user name' and 'password' communicated to him by the LVO or VSO and proceed to submit the return in Form VAT 100 electronically, following the instructions and procedure contained in the said website.

(3) Every such dealer shall enter in the website specified above the particulars of any statutory form required to be filed along with any return submitted in the website specified above and also file the statutory form in the office of the LVO or VSO, following the instructions contained in the website.

(4) Every such dealer shall file to the LVO or VSO concerned, a duly signed hard copy of the consolidated statement of all such electronically submitted quarterly or monthly returns for the period from April to September and October to March of every financial year, downloaded from the website http://vat.kar.nic.in/, within thirty days after the close of the corresponding period of six months.

**PRADEEP SINGH KHAROLA**

Commissioner of Commercial Taxes (Karnataka), Bangalore

**DEPARTMENT OF COMMERCIAL TAXES**

**Office of the Commissioner of Commercial Taxes (Karnataka), Bangalore**

**No. KSA/CR-60/2010-11, dated:30th September 2010**

**NOTIFICATION-III**

In exercise of the powers under the first proviso to sub-section (1) of Section 35 of the Karnataka Value Added Tax Act, 2003, it is hereby notified with immediate effect that commencing from the quarter ending on 30th September, 2010, every dealer paying tax under Section 4 of the said Act and whose total turnover in a year does not exceed twenty five lakh rupees may submit for any quarter, return in Form VAT 100 electronically through internet on or before the 15th day of the month following the relevant quarter in the following manner:

(1) Every such dealer shall obtain his 'user name' and 'password' from the jurisdictional Local VAT Officer (LVO) or VAT Sub-Officer (VSO), if not already communicated to him by the jurisdictional LVO or VSO.

(2) Every such dealer shall log on to the website http://vat.kar.nic.in/, with the 'user name' and 'password' communicated to him by the LVO or VSO and proceed to submit the return in Form VAT 100 electronically, following the instructions and procedure contained in the said website.

(3) Every such dealer shall enter in the website specified above the particulars of any statutory form required to be filed along with any return submitted in the website specified above and also file the statutory form in the office of the LVO or VSO, following the instructions contained in the website.

(4) Every such dealer shall file to the LVO or VSO concerned, a duly signed hard copy of the consolidated annual statement of all such electronically submitted quarterly returns during any financial year, downloaded from the website http://vat.kar.nic.in/, within thirty days after the close of the financial year.

**PRADEEP SINGH KHAROLA**

PR-1499 Commissioner of Commercial Taxes (Karnataka), Bangalore

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ) ರವರ ಕಛೇರಿ ವಾಣಿಜ್ಯ ತೆರಿಗೆ ಕಾರ್ಯಾಲಯ, ಬೆಂಗಳೂರು**

**ಸಂಖ್ಯೆ:ಕೆಎಸ್‌ಎ/ಸಿಆರ್–60/2010–11, ಬೆಂಗಳೂರು, ದಿನಾಂಕ 30ನೇ ಸೆಪ್ಟೆಂಬರ್, 2010.**

**ಅಧಿಸೂಚನೆ – 1**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯಿದೆ, 2003 ರ ಪ್ರಕರಣ 35 (1) ರಡಿ ಪ್ರದತ್ತವಾದ ಅಧಿಕಾರದನ್ವಯ ಸದರಿ ಕಾಯಿದೆಯಡಿ ನೋಂದಾಯಿತರಾಗಿ ಪ್ರಕರಣ 15 ರ ಉಪಪ್ರಕರಣ (1) ರ ಖಂಡ (ಬಿ) ಅಥವಾ ಖಂಡ (ಡಿ) ರನ್ವಯ ರಾಜಿ ತೆರಿಗೆ ಪದ್ಧತಿಯಡಿ ತೆರಿಗೆ ಪಾವತಿಸುವ ಪ್ರತಿ ವರ್ತಕರು 2010 ರ ಸೆಪ್ಟೆಂಬರ್ 30 ಕ್ಕೆ ಕೊನೆಗೊಳ್ಳುವ ತಿಂಗಳಿಗೆ ಮತ್ತು ನಂತರದ ತಿಂಗಳುಗಳಿಗೆ ಪ್ರತಿ ತಿಂಗಳ ವಹಿವಾಟು ವಿವರಗಳನ್ನು ಅದರ ಮುಂದಿನ ತಿಂಗಳ 15 ನೇ ತಾರೀಖು ಅಥವಾ ಅದಕ್ಕಿಂತ ಮೊದಲು ನಮೂನೆ ವ್ಯಾಟ್ 120 ರಲ್ಲಿ ಈ ಕೆಳಕಂಡಂತೆ ವಿದ್ಯುನ್ಮಾನ ಪದ್ಧತಿಯಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸಬಹುದೆಂದು ತಕ್ಷಣದಿಂದ ಜಾರಿಗೆ ಬರುವಂತೆ ಅಧಿಸೂಚಿಸಲಾಗಿದೆ:–

(1) ಇಂತಹ ಎಲ್ಲ ವರ್ತಕರು ಇದುವರೆಗೂ 'user name and password' ಗಳನ್ನು ಪಡೆಯದೇ ಇದ್ದಲ್ಲಿ ಸಂಬಂಧಿತ ಕ್ಷೇತ್ರವ್ಯಾಪ್ತಿಯ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ/ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರಿಂದ ತಕ್ಷಣವೇ ಪಡೆಯುವುದು.

(2) ಇಂತಹ ವರ್ತಕರು ಸದರಿ 'user name and password'ನ್ನು ಬಳಸಿ ಇಲಾಖೆಯ ವೆಬ್‌ಸೈಟ್ ಆದ http://vat.kar.nic.in/ ಗೆ ಪ್ರವೇಶಿಸಿ, ಅದರಲ್ಲಿ ನೀಡಿರುವ ಸೂಚನೆಗಳನ್ನು ಮತ್ತು ವಿಧಿವಿಧಾನಗಳನ್ನು ಅನುಸರಿಸಿ ನಮೂನೆ ವ್ಯಾಟ್ 120 ನ್ನು ವಿದ್ಯುನ್ಮಾನ ವಿಧಾನದ ಮೂಲಕ ಸಲ್ಲಿಸುವುದು.

(3) ಸಂಬಂಧಿತ ರಿಟರ್ನ್ ಜತೆಗೆ ಸಲ್ಲಿಸಬೇಕಾದ ಯಾವುದೇ ಶಾಸನಬದ್ಧ ನಮೂನೆಗಳ ವಿವರಗಳನ್ನು ಮೇಲೆ ಕಾಣಿಸಿದ ವೆಬ್‌ಸೈಟ್‌ನಲ್ಲಿನ ಸೂಚನೆಗಳನ್ನು ಅನುಸರಿಸಿ ಸಲ್ಲಿಸುವುದು ಮತ್ತು ಅನಂತರ ಅಂತಹ ಶಾಸನಬದ್ಧ ನಮೂನೆಗಳನ್ನು ಭೌತಿಕವಾಗಿ ಸಂಬಂಧಿತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ/ ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರ ಕಛೇರಿಯಲ್ಲಿ ನೀಡುವುದು.

(4) ಈ ರೀತಿ ವಿದ್ಯುನ್ಮಾನ ಪದ್ಧತಿಯಂತೆ ರಿಟರ್ನ್ ಸಲ್ಲಿಸಿದ ವರ್ತಕರು ಪ್ರತಿ ಆರ್ಥಿಕ ವರ್ಷದ ಏಪ್ರಿಲ್‌ನಿಂದ ಸೆಪ್ಟೆಂಬರ್ ಹಾಗೂ ಅಕ್ಟೋಬರ್‌ನಿಂದ ಮಾರ್ಚ್‌ವರೆಗೆ ಸಲ್ಲಿಸಿದ ಮಾಸಿಕ 'ಇ–ನಮೂನೆ'ಗಳ ಕ್ರೋಢೀಕೃತ ವರದಿಯನ್ನು ಮೇಲೆ ಕಾಣಿಸಿದ ವೆಬ್‌ಸೈಟ್‌ನಿಂದ ಪಡೆದು ಅಧಿಕೃತ ಸಹಿಯೊಂದಿಗೆ ಆಯಾಯ ಅರ್ಧವರ್ಷ ಮುಗಿದ 30 ದಿನದೊಳಗೆ ಸಂಬಂಧಿತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ / ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರ ಕಛೇರಿಗೆ ಸಲ್ಲಿಸುವುದು.

**ಪ್ರದೀಪ್ ಸಿಂಗ್ ಖರೋಲ**

ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು.

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ) ರವರ ಕಛೇರಿ ವಾಣಿಜ್ಯ ತೆರಿಗೆ ಕಾರ್ಯಾಲಯ,**

**ಸಂಖ್ಯೆ:ಕೆಎಸ್‌ಎ/ಸಿಆರ್–60/2010–11, ಬೆಂಗಳೂರು, ದಿನಾಂಕ 30ನೇ ಸೆಪ್ಟೆಂಬರ್, 2010.**

**ಅಧಿಸೂಚನೆ – 2**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯಿದೆ, 2003 ರ ಪ್ರಕರಣ 35 (1) ರಡಿ ಪ್ರದತ್ತವಾದ ಅಧಿಕಾರದನ್ವಯ ಸದರಿ ಕಾಯಿದೆಯಡಿ ನೋಂದಾಯಿತರಾಗಿ ಪ್ರಕರಣ 4 ರ ಉಪಪ್ರಕರಣಗಳಾದ (4) ಮತ್ತು (5) ರಡಿಯಲ್ಲಿ ತೆರಿಗೆ ಪಾವತಿಸುವ ಮತ್ತು ಅದೇ ಪ್ರಕರಣದ ಉಪಪ್ರಕರಣ (1) ರಡಿ ತೆರಿಗೆ ಬಾಧ್ಯತೆಗೆ ಒಳಪಡುವ ಎಲ್ಲ ವರ್ತಕರೂ, ಅವರವರಿಗೆ ಅನ್ವಯವಾಗುವಂತೆ 2010ರ ಸೆಪ್ಟೆಂಬರ್ 30 ಕ್ಕೆ ಕೊನೆಗೊಳ್ಳುವ ತ್ರೈಮಾಸಿಕಕ್ಕೆ ಮತ್ತು ನಂತರದ ತ್ರೈಮಾಸಿಕಗಳಿಗೆ ಆಯಾಯ ತ್ರೈಮಾಸಿಕ ಮುಗಿದ 15 ದಿನಗಳ ಒಳಗಾಗಿ ಅಥವಾ 2010 ರ ಸೆಪ್ಟೆಂಬರ್ ತಿಂಗಳಿಗೆ ಮತ್ತು ನಂತರದ ತಿಂಗಳುಗಳಿಗೆ ಆಯಾಯ ತಿಂಗಳು ಮುಗಿದ 20 ದಿನಗಳ ಒಳಗಾಗಿ, ವಹಿವಾಟು ವಿವರವನ್ನು ನಮೂನೆ ವ್ಯಾಟ್ 105 ರಲ್ಲಿ ಈ ಕೆಳಕಂಡ ವಿದ್ಯುನ್ಮಾನ ಪದ್ಧತಿಯಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸಬಹುದೆಂದು ತಕ್ಷಣದಿಂದ ಜಾರಿಗೆ ಬರುವಂತೆ ಅಧಿಸೂಚಿಸಲಾಗಿದೆ:–

(1) ಇಂತಹ ಎಲ್ಲಾ ವರ್ತಕರು ಇದುವರೆಗೂ 'user name and password'ನ್ನು ಪಡೆಯದೇ ಇದ್ದಲ್ಲಿ ಸಂಬಂಧಿತ ಕ್ಷೇತ್ರವ್ಯಾಪ್ತಿಯ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ/ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರಿಂದ ತಕ್ಷಣವೇ ಪಡೆಯುವುದು.

(2) ಇಂತಹ ವರ್ತಕರು ಸದರಿ 'user name and password'ನ್ನು ಬಳಸಿ ಇಲಾಖೆಯ ವೆಬ್‌ಸೈಟ್ ಆದ http://vat.kar.nic.in/, ಗೆ ಪ್ರವೇಶಿಸಿ, ಅದರಲ್ಲಿ ನೀಡಿರುವ ಸೂಚನೆಗಳನ್ನು ಮತ್ತು ವಿಧಿವಿಧಾನಗಳನ್ನು ಅನುಸರಿಸಿ ನಮೂನೆ ವ್ಯಾಟ್ 105 ನ್ನು ವಿದ್ಯುನ್ಮಾನ ವಿಧಾನದ ಮೂಲಕ ಸಲ್ಲಿಸುವುದು.

(3) ಸಂಬಂಧಿತ ರಿಟರ್ನ್ ಜತೆಗೆ ಸಲ್ಲಿಸಬೇಕಾದ ಯಾವುದೇ ಶಾಸನಬದ್ಧ ನಮೂನೆಗಳ ವಿವರಗಳನ್ನು ಮೇಲೆ ಕಾಣಿಸಿದ ವೆಬ್‌ಸೈಟ್‌ನಲ್ಲಿನ ಸೂಚನೆಗಳನ್ನು ಅನುಸರಿಸಿ ಸಲ್ಲಿಸುವುದು ಮತ್ತು ಅನಂತರ ಅಂತಹ ಶಾಸನಬದ್ಧ ನಮೂನೆಗಳನ್ನು ಭೌತಿಕವಾಗಿ ಸಂಬಂಧಿತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ/ ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರ ಕಛೇರಿಯಲ್ಲಿ ನೀಡುವುದು.

(4) ಈ ರೀತಿ ವಿದ್ಯುನ್ಮಾನ ಪದ್ಧತಿಯಂತೆ ರಿಟರ್ನ್ ಸಲ್ಲಿಸಿದ ವರ್ತಕರು ಪ್ರತಿ ಆರ್ಥಿಕ ವರ್ಷದ ಏಪ್ರಿಲ್‌ನಿಂದ ಸೆಪ್ಟೆಂಬರ್ ಹಾಗೂ ಅಕ್ಟೋಬರ್‌ನಿಂದ ಮಾರ್ಚ್‌ವರೆಗೆ ಸಲ್ಲಿಸಿದ ತ್ರೈಮಾಸಿಕ/ಮಾಸಿಕ 'ಇ–ನಮೂನೆಗಳ ಕ್ರೋಢೀಕೃತ ವರದಿಯನ್ನು ಮೇಲೆ ಕಾಣಿಸಿದ ವೆಬ್‌ಸೈಟ್‌ನಿಂದ ಪಡೆದು ಅಧಿಕೃತ ಸಹಿಯೊಂದಿಗೆ ಆಯಾಯ ಅರ್ಧವರ್ಷ ಮುಗಿದ 30 ದಿನದೊಳಗೆ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ / ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರ ಕಛೇರಿಗೆ ಸಲ್ಲಿಸುವುದು.

**ಪ್ರದೀಪ್ ಸಿಂಗ್ ಖರೋಲ**

ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು.

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ) ರವರ ಕಛೇರಿ ವಾಣಿಜ್ಯ ತೆರಿಗೆ ಕಾರ್ಯಾಲಯ,**

**ಸಂಖ್ಯೆ:ಕೆಎಸ್‌ಎ/ಸಿಆರ್–60/2010–11, ಬೆಂಗಳೂರು, ದಿನಾಂಕ 30ನೇ ಸೆಪ್ಟೆಂಬರ್, 2010.**

**ಅಧಿಸೂಚನೆ – 3**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯಿದೆ, 2003 ರ ಪ್ರಕರಣ 35 (1) ರಡಿ ಪ್ರದತ್ತವಾದ ಅಧಿಕಾರದನ್ವಯ ಸದರಿ ಕಾಯಿದೆಯಡಿ ನೋಂದಾಯಿತರಾಗಿ ವಾರ್ಷಿಕ 25 ಲಕ್ಷಕ್ಕಿಂತ ಕಡಿಮೆ ವಹಿವಾಟು ಇದ್ದು, ಪ್ರಕರಣ 4 ರಡಿಯಲ್ಲಿ ತೆರಿಗೆ ಪಾವತಿಸಲು ತ್ರೈಮಾಸಿಕಕ್ಕೊಮ್ಮೆ ವಹಿವಾಟು ಪತ್ರಿಕೆ ಸಲ್ಲಿಸುವ ವರ್ತಕರು 2010 ರ ಸೆಪ್ಟೆಂಬರ್ 30ಕ್ಕೆ ಕೊನೆಗೊಳ್ಳುವ ತ್ರೈಮಾಸಿಕ ಮತ್ತು ನಂತರದ ಪ್ರತಿ ತ್ರೈಮಾಸಿಕ ಅವಧಿಗೆ ವ್ಯಾಟ್ ನಮೂನೆ 100ನ್ನು ತ್ರೈಮಾಸಿಕ ಮುಗಿದ 15 ದಿನಗಳ ಒಳಗಾಗಿ ಈ ಕೆಳಕಂಡಂತೆ ವಿದ್ಯುನ್ಮಾನ ಪದ್ಧತಿಯಲ್ಲಿ ಅಂತರ್ಜಾಲದ ಮೂಲಕ ಸಲ್ಲಿಸಬಹುದೆಂದು ತಕ್ಷಣದಿಂದ ಜಾರಿಗೆ ಬರುವಂತೆ ಅಧಿಸೂಚಿಸಲಾಗಿದೆ:–

(1) ಇಂತಹ ಎಲ್ಲಾ ವರ್ತಕರು ಇದುವರೆಗೂ 'user name and password'ನ್ನು ಪಡೆಯದೇ ಇದ್ದಲ್ಲಿ ಸಂಬಂಧಿತ ಕ್ಷೇತ್ರವ್ಯಾಪ್ತಿಯ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ/ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರಿಂದ ತಕ್ಷಣವೇ ಪಡೆಯುವುದು.

(2) ಇಂತಹ ವರ್ತಕರು ಸದರಿ 'user name and password'ನ್ನು ಬಳಸಿ ಇಲಾಖೆಯ ವೆಬ್‌ಸೈಟ್ ಆದ http://vat.kar.nic.in/, ಗೆ ಪ್ರವೇಶಿಸಿ, ಅದರಲ್ಲಿ ನೀಡಿರುವ ಸೂಚನೆಗಳನ್ನು ಮತ್ತು ವಿಧಿವಿಧಾನಗಳನ್ನು ಅನುಸರಿಸಿ ನಮೂನೆ ವ್ಯಾಟ್ 100 ನ್ನು ವಿದ್ಯುನ್ಮಾನ ವಿಧಾನದ ಮೂಲಕ ಸಲ್ಲಿಸುವುದು.

(3) ಸಂಬಂಧಿತ ರಿಟರ್ನ್ ಜತೆಗೆ ಸಲ್ಲಿಸಬೇಕಾದ ಯಾವುದೇ ಶಾಸನಬದ್ಧ ನಮೂನೆಗಳ ವಿವರಗಳನ್ನು ಮೇಲೆ ಕಾಣಿಸಿದ ವೆಬ್‌ಸೈಟ್‌ನಲ್ಲಿನ ಸೂಚನೆಗಳನ್ನು ಅನುಸರಿಸಿ ಸಲ್ಲಿಸುವುದು ಮತ್ತು ಅನಂತರ ಅಂತಹ ಶಾಸನಬದ್ಧ ನಮೂನೆಗಳನ್ನು ಭೌತಿಕವಾಗಿ ಸಂಬಂಧಿತ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ/ ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರ ಕಛೇರಿಯಲ್ಲಿ ನೀಡುವುದು.

(4) ಈ ರೀತಿ ವಿದ್ಯುನ್ಮಾನ ಪದ್ಧತಿಯಂತೆ ರಿಟರ್ನ್ ಸಲ್ಲಿಸಿದ ವರ್ತಕರು ಪ್ರತಿ ಆರ್ಥಿಕ ವರ್ಷದಲ್ಲಿ ಸಲ್ಲಿಸಿದ ತ್ರೈಮಾಸಿಕ 'ಇ–ನಮೂನೆ'ಗಳ ಕ್ರೋಢೀಕೃತ ವರದಿಯನ್ನು ಮೇಲೆ ಕಾಣಿಸಿದ ವೆಬ್‌ಸೈಟ್‌ನಿಂದ ಪಡೆದು ಅಧಿಕೃತ ಸಹಿಯೊಂದಿಗೆ ಆಯಾಯ ಆರ್ಥಿಕ ವರ್ಷ ಮುಗಿದ 30 ದಿನದೊಳಗೆ ಸ್ಥಳೀಯ ಮೌಲ್ಯವರ್ಧಿತ ತೆರಿಗೆ ಅಧಿಕಾರಿ / ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರ ಕಛೇರಿಗೆ ಸಲ್ಲಿಸುವುದು.

**ಪ್ರದೀಪ್ ಸಿಂಗ್ ಖರೋಲ**

ಪಿಆರ್–1561 ವಾಣಿಜ್ಯ ತೆರಿಗಳ ಆಯುಕ್ತರು (ಕರ್ನಾಟಕ), ಬೆಂಗಳೂರು.

## ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು

**ಸಂಖ್ಯೆ: ಗಭೂಇ/ಗಗುಶಾ/260 ಎಎಂಎಲ್ 05/10–11/4253, ದಿನಾಂಕ:6–8–2010**

**ವಿಷಯ:** ಮೆ: ಗಾಯತ್ರಿ ಮೈನ್ಸ್ & ಮಿನರಲ್ಸ್‌ರವರು ದಿನಾಂಕ:07–03–2005ರಂದು ಬಳ್ಳಾರಿ ಜಿಲ್ಲೆ ಮತ್ತು ತಾಲ್ಲೂಕು, ಜಾನೆಕುಂಟ ಗ್ರಾಮದ 28.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1) ಈ ಕಛೇರಿ ನೋಟೀಸ್ ಸಂಖ್ಯೆ:260 ಎಎಂಎಲ್ 05/15055–56 ದಿನಾಂಕ:31–03–2010.
2) ಅರ್ಜಿದಾರರ ವಿವರಣೆ ದಿನಾಂಕ:30–04–2010.

**ಪ್ರಸ್ತಾವನೆ:**

ಮೆ॥ ಗಾಯತ್ರಿ ಮೈನ್ಸ್ & ಮಿನರಲ್ಸ್ ರವರು ಬಳ್ಳಾರಿ ಜಿಲ್ಲೆ ಮತ್ತು ತಾಲ್ಲೂಕು, ಜಾನೆಕುಂಟ ಗ್ರಾಮದ 28.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಖನಿಜಕ್ಕಾಗಿ ಕೋರಿ ಸಲ್ಲಿಸಿರುವ ಗಣಿ ಗುತ್ತಿಗೆ ಅರ್ಜಿ ಸಂಖ್ಯೆ:260 ಎಎಂಎಲ್ 05 ನ್ನು ಪರಿಶೀಲಿಸಿದೆ.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಅತಿವ್ಯಾಪ್ತಿಯಾಗುತ್ತಿರುವ ಬಗ್ಗೆ ಉಲ್ಲೇಖ(1)ರ ಈ ಕಚೇರಿ ಸೂಚನಾ ಪತ್ರದಲ್ಲಿ ತಿಳಿಸಿ, 30 ದಿನಗಳೊಳಗಾಗಿ ವಿವರಣೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಉಲ್ಲೇಖ(2)ರಲ್ಲಿ ಅರ್ಜಿದಾರರು ನೀಡಿರುವ ವಿವರಣೆಯಲ್ಲಿ, ಸದರಿ ಪ್ರದೇಶವು ವಿಸ್ತಾರವಾದ ಪ್ರದೇಶವಾಗಿದ್ದು, ತಮಗೂ ಮಂಜೂರಾತಿ ನೀಡಿ ಗಣಿಗಾರಿಕೆ ಮಾಡಲು ಅವಕಾಶ ಮಾಡಿಕೊಡುವಂತೆ ಕೋರಿರುತ್ತಾರೆ. ಆದರೆ, ಮತ್ತೊಮ್ಮೆ ಪರಿಶೀಲಿಸಲಾಗಿ, ಸದರಿ ಅಪೇಕ್ಷಿತ ಪ್ರದೇಶದ ಮುಕ್ತತೆಯ ಬಗ್ಗೆ ಖಚಿತಪಡಿಸಿಕೊಂಡಿದ್ದು, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ:ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 260 ಎಎಂಎಲ್ 05ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

**ನಿರ್ದೇಶಕರು.**

## ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು

**ಸಂಖ್ಯೆ: ಗಭೂಇ/ಗಗುಶಾ:46 ಎಪಿಎಲ್ 08/10–11/4255, ದಿನಾಂಕ:6–8–2010**

**ವಿಷಯ:** ಶ್ರೀಮತಿ ವಿ. ರೂಪ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB ರೇಂಜ್‌ನಲ್ಲಿ 420.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು, ಮ್ಯಾಂಗನಿಸ್, ಮತ್ತು ಇತರೆ ಖನಿಜಗಳಿಗಾಗಿ ಸಲ್ಲಿಸಿರುವ ಖನಿಜನ್ವೇಷಣಾ ಲೈಸೆನ್ಸ್ ಅರ್ಜಿ ದಿನಾಂಕ: 29–03–2008ರ ಬಗ್ಗೆ

**ಉಲ್ಲೇಖ:** 1) ಈ ಕಛೇರಿ ಸೂಚನ ಪತ್ರ ಸಂಖ್ಯೆ:ಗಭೂಇ:ಗುಗುಶಾ:46 APL 08, ದಿನಾಂಕ:20–04–2010.
2) ಅರ್ಜಿದಾರರ ವಿವರಣೆ ದಿನಾಂಕ:30–04–2010.

**ಪ್ರಸ್ತಾವನೆ:**

ಶ್ರೀಮತಿ ವಿ. ರೂಪ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB ರೇಂಜ್‌ನಲ್ಲಿ 420.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು, ಮ್ಯಾಂಗನೀಸ್, ಮತ್ತು ಇತರೆ ಖನಿಜಗಳಿಗಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ:46 ಎಪಿಎಲ್ 08ನ್ನು ಪರಿಶೀಲಿಸಿದೆ.

ಅರ್ಜಿದಾರರಿಗೆ ಉಲ್ಲೇಖ (1)ರ ಈ ಕಛೇರಿ ಸೂಚನಾ ಪತ್ರದಲ್ಲಿ 08 ಪೂರ್ವ ಗಣಿಗುತ್ತಿಗೆ ಅರ್ಜಿಗಳ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿರುವ ಬಗ್ಗೆ ತಿಳಿಸಿ, ವಿವರಣೆಯನ್ನು ಕೇಳಲಾಗಿತ್ತು. ಅರ್ಜಿದಾರರು ಉಲ್ಲೇಖ(2)ರ ತಮ್ಮ ಉತ್ತರದಲ್ಲಿ ಮತ್ತೊಮ್ಮೆ ನಕ್ಷಾ ವಿಭಾಗದಲ್ಲಿ ಪರಿಶೀಲಿಸಿ, ಖಾಲಿ ಇರುವ

ಪ್ರದೇಶವನ್ನು ಖನಿಜಾನ್ವೇಷಣೆಗಾಗಿ ಮಂಜೂರು ಮಾಡುವಂತೆ ಕೋರಿರುತ್ತಾರೆ. ಅವರ ಮನವಿಯಂತೆ ಪುನ: ಪರಿಶೀಲಿಸಲಾಗಿ, ಕೋರಿರುವ ಪ್ರದೇಶವು ಪೂರ್ಣ ಪ್ರಮಾಣದಲ್ಲಿ ಅತಿವ್ಯಾಪ್ತಿಯಾಗುತ್ತಿರುವುದು ಖಚಿತಗೊಂಡಿರುವುದರಿಂದ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ:ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ 46 ಎಪಿಎಲ್ 08ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ಪಿಆರ್–1278 **ನಿರ್ದೇಶಕರು.**

**ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ–1) ಡಿ.ವ್ಹಿ.ಓ, ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರವರ ಕಛೇರಿ ಗುಲಬರ್ಗಾ ವಿಭಾಗ, ಗುಲಬರ್ಗಾ**

**ಪ್ರಕಟಣೆ**

1) ಮಾಹಿತಿ ಪಡೆಯಲು ಹಕ್ಕು ಅಧಿನಿಯಮ, ನಿಯಮಗಳು 2005 ದಿನಾಂಕ:11–10–2005 ಮತ್ತು ಪರಿಷ್ಕರಣೆ ದಿನಾಂಕ:31–05–2008ರಲ್ಲಿ ಇದ್ದಂತೆ.
2) ಮಾಹಿತಿ ಕೋರಿಕೆ ಅರ್ಜಿಗಳನ್ನು ನಿಗದಿತ ನಮೂನೆಯಲ್ಲಿ ಸಲ್ಲಿಸಬೇಕು. ಅರ್ಜಿ ನಮೂನೆಯನ್ನು ಉಚಿತವಾಗಿ ಈ ಕಛೇರಿಯ ಸಾರ್ವಜನಿಕ ಮಾಹಿತಿ ಹಕ್ಕು ವಿಭಾಗದಿಂದ ಪಡೆಯಬಹುದು.
3) ಸರಿಯಾಗಿ ಭರ್ತಿ ಮಾಡಿದ ಅರ್ಜಿಯನ್ನು ಈ ಕಛೇರಿಯ ಸಾರ್ವಜನಿಕ ಟಪಾಲು ಸ್ವೀಕೃತಿ ವಿಭಾಗದಲ್ಲಿ ಸಲ್ಲಿಸಬೇಕು ಮತ್ತು ಸ್ವೀಕೃತಿಯನ್ನು ತಪ್ಪದೇ ಪಡೆಯಬೇಕು ಮತ್ತು ರೂ.10–00 ಅರ್ಜಿ ಶುಲ್ಕವನ್ನು ಪಾವತಿಸತಕ್ಕದ್ದು.
4) ಅರ್ಜಿಯಲ್ಲಿ ಕೇಂದ್ರ ಮಾಹಿತಿಯನ್ನು ಒದಗಿಸಲು ಅವಕಾಶವಿದ್ದಲ್ಲಿ ಸಂದಾಯ ಮಾಡಬೇಕಾದ ಶುಲ್ಕದ ಮಾಹಿತಿಯನ್ನು ನಿಮಗೆ 7 ದಿನಗಳ ಒಳಗೆ ತಿಳಿಸಲಾಗುವುದು.
5) ಶುಲ್ಕ ಪಾವತಿಸಿದ ದಿನಾಂಕದಿಂದ 30 ದಿನಗಳೊಳಗೆ ಕೋರಿದ ಮಾಹಿತಿಯನ್ನು ಒದಗಿಸಲಾಗುತ್ತದೆ.
6) ಅರ್ಜಿಯಲ್ಲಿ ಕೋರಿದ ಮಾಹಿತಿಯನ್ನು ಒದಗಿಸಲು ಅವಕಾಶವಿದ್ದಲ್ಲಿ 15 ದಿನಗಳೊಳಗೆ ತಿಳಿಸಲಾಗುವುದು.
7) ನಿಗದಿತ ಕಾಲಾವಧಿಯಲ್ಲಿ ಮಾಹಿತಿ ಅಥವಾ ಸೂಚನೆ ನೀಡದಿದ್ದಲ್ಲಿ ಅಥವಾ ಆದೇಶದಿಂದ ಅರ್ಜಿದಾರರು ಬಾಧಿತರಾಗಿದ್ದಲ್ಲಿ 30 ದಿನಗಳೊಳಗೆ ಮೇಲ್ಮನವಿ ಪ್ರಾಧಿಕಾರಕ್ಕೆ ಮೇಲ್ಮನವಿ ಸಲ್ಲಿಸಬಹುದು.
8) ಮಾಹಿತಿ ನೀಡಲು 1) ವಾಣಿಜ್ಯ ತೆರಿಗೆ ಉಪ ಆಯುಕ್ತರು (ಆಡಿಟ)–1 ಡಿ.ವ್ಹಿ.ಓ ಗುಲಬರ್ಗಾ 2) ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ)–1, ಗುಲಬರ್ಗಾ 3) ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ)–2, ಗುಲಬರ್ಗಾ ಇವರ ಸಕ್ಷಮ ಪ್ರಾಧಿಕಾರಿಯಾಗಿರುತ್ತಾರೆ.
9) ಮೇಲ್ಮನವಿ ಸಲ್ಲಿಸಲು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ) ವಿಭಾಗೀಯ ಕಛೇರಿ, ಗುಲಬರ್ಗಾ ಇವರು ಮೇಲ್ಮನವಿ ಪ್ರಾಧಿಕಾರಿಯಾಗಿರುತ್ತಾರೆ.
10) ಹೆಚ್ಚಿನ ವಿವರಗಳಿಗೆ ಮೇಲ್ಕಂಡ ಅಧಿಕಾರಿಗಳನ್ನು ಕಛೇರಿಯಲ್ಲಿ ಸಂಪರ್ಕಿಸಬಹುದು.

ದಿನಾಂಕ:04–08–2010
ಸ್ಥಳ : ಗುಲಬರ್ಗಾ

ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು
(ಆಡಿಟ)–1, ಡಿ.ವ್ಹಿ.ಓ. ಗುಲಬರ್ಗಾ

**ಕರ್ನಾಟಕ ಸರ್ಕಾರ**

**ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್–1), ಡಿ.ವ್ಹಿ.ಓ. ಗುಲಬರ್ಗಾ**

**ಸುತ್ತೋಲೆ**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22) ಅಡಿಯಲ್ಲಿ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ಗಾಂಧಿನಗರ, ಬೆಂಗಳೂರು ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ 5(1) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಮತ್ತು ಸೆಕ್ಷನ್ 19(1)ರ ಅಡಿಯಲ್ಲಿ 'ಮೇಲ್ಮನವಿ ಪ್ರಾಧಿಕಾರ' ಎಂದು ನೇಮಕ ಮಾಡಲಾಗಿದೆ.

| ಕ್ರ.ಸಂ. | ಕಛೇರಿ ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್ 5(1) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್ 19(1) |
|---|---|---|---|
| 1 | 2 | 3 | 4 |
| 1 | ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್–1), ಡಿ.ವ್ಹಿ.ಓ. ಗುಲಬರ್ಗಾ | ಶ್ರೀ ಮೋಹ್ಮದ್ ಮಸ್ಲೆಹುದ್ದಿನ್ ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್–1), ಡಿ.ವ್ಹಿ.ಓ. ಗುಲಬರ್ಗಾ | ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರು (ಆಡಳಿತ) ವಿಭಾಗೀಯ ವಾಣಿಜ್ಯ ತೆರಿಗೆ ಕಛೇರಿ, ಗುಲಬರ್ಗಾ |
| 2 | ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್–1), ಗುಲಬರ್ಗಾ | ಶ್ರೀ ಹೆಚ್.ಎಸ್. ಬಸವಪ್ರಭು, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್–1), ಗುಲಬರ್ಗಾ | |
| 3. | ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್–2), ಗುಲಬರ್ಗಾ | ಶ್ರೀ ವಿಶ್ವನಾಥ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್–2), ಗುಲಬರ್ಗಾ | |

ಮೋಹ್ಮದ್ ಮಸ್ಲೆಹುದ್ದಿನ್
ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು
(ಆಡಿಟ)–1, ಡಿ.ವ್ಹಿ.ಓ. ಗುಲಬರ್ಗಾ

**ಕರ್ನಾಟಕ ಸರ್ಕಾರ**

**ದಿನಾಂಕ:1ನೇ ಅಕ್ಟೋಬರ್ 2009**

**ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್-1), ಡಿ.ವ್ಹಿ.ಓ. ಗುಲಬರ್ಗಾ**

**ಮಾಹಿತಿ ಹಕ್ಕು ಕೈಪಿಡಿ-2005 ಸೆಕ್ಷನ್ 4(1)(ಬಿ) ಅನ್ವಯ**

1. ಸಂಸ್ಥೆಯ ಬಗ್ಗೆ ವಿವರಗಳು: ಕಾರ್ಯಗಳು ಮತ್ತು ಕರ್ತವ್ಯಗಳು:

ಅ) ಸಂಸ್ಥೆಯ ಹೆಸರು : ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್-1), ಡಿ.ವ್ಹಿ.ಓ. ಗುಲಬರ್ಗಾ

ಆ) ರಚನೆ :

| ತಾಂತ್ರಿಕ ಶಾಖೆ | ಆಡಳಿತ ಶಾಖೆ |
|---|---|
| 1) ವಾಣಿಜ್ಯ ತೆರಿಗೆ ಪರಿವೀಕ್ಷಕರು-8 | 1) ಪ್ರಥಮ ದರ್ಜೆ ಸಹಾಯಕರು-01 |
| | 2) ದ್ವಿತೀಯ ದರ್ಜೆ ಸಹಾಯಕರು-02 |
| | 3) ಬೆರಳಚ್ಚುಗಾರರು-02 |
| | 4) ಕರ ವಸೂಲಿಗಾರರು-01 |

**2ಇ) ಕಾರ್ಯಗಳು ಮತ್ತು ಕರ್ತವ್ಯಗಳು:**

1) ಮಾನ್ಯ ಆಯುಕ್ತರು ವಾಣಿಜ್ಯ ತೆರಿಗೆ ಇಲಾಖೆ, ಬೆಂಗಳೂರು ಇವರು ನಿಯೋಜಿಸಿರುವ ವಾಣಿಜ್ಯ ತೆರಿಗೆ ಇಲಾಖೆಯ ಗುಲಬರ್ಗಾ ವಿಭಾಗ ಕಛೇರಿಯ ಅಡಿಯಲ್ಲಿ ಬರುವ ವರ್ತಕರ ಪ್ರಕರಣದಲ್ಲಿ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ-2003, ಕೇಂದ್ರ ಮಾರಾಟ ತೆರಿಗೆ ಕಾಯ್ದೆ 1956, ಕರ್ನಾಟಕ ಪ್ರವೇಶ ತೆರಿಗೆ ಕಾಯ್ದೆ 1979ರ ಅಡಿಯಲ್ಲಿ ಮರು ಕರ ನಿರ್ಧರಣೆ, ಕರ ನಿರ್ಧರಣೆ ಪ್ರಕರಣಗಳನ್ನು ಕೈಗೊಳ್ಳುವುದು.

2) ಮಾನ್ಯ ಜಂಟಿ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ, ವಿಭಾಗೀಯ ಕಛೇರಿಯ ಗುಲಬರ್ಗಾ, ಇವರು ಆದೇಶಿಸಿದ ಇತರೇ ಕೆಲಸ ಕಾರ್ಯಗಳನ್ನು ಕೈಗೊಳ್ಳುವುದು.

**3) ಅಧಿಕಾರಿಗಳು ಮತ್ತು ಸಿಬ್ಬಂದಿ:ಅಧಿಕಾರ ಮತ್ತು ಕರ್ತವ್ಯಗಳು:**

1) ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು (ಆಡಿಟ್-1) ಮತ್ತು ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್-1) ಹಾಗೂ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು (ಆಡಿಟ್-2) ಗುಲಬರ್ಗಾ ಕ್ರ.ಸಂ.2(ಇ)ನಲ್ಲಿ ತಿಳಿಸಿರುವಂತೆ.

2) **ವಾಣಿಜ್ಯ ತೆರಿಗೆ ಪರಿವೀಕ್ಷಕರು:**
ವರ್ತಕರು ಮರು ಕರ ನಿರ್ಧಾರಣೆ/ಕರ ನಿರ್ಧಾರಣೆ ಪ್ರಕರಣಗಳಲ್ಲಿ ಹಾಗೂ ತೆರಿಗೆ ಬಾಕಿ ವಸೂಲಾತಿ ನಡಾವಳಿಗಳಲ್ಲಿ ಅಧಿಕಾರಿಗಳಿಗೆ ಸಹಾಯ ಮಾಡುವುದು.

3) **ಪ್ರಥಮ ದರ್ಜೆ ಸಹಾಯಕರು:**
ಸಾಮಾನ್ಯ ನಗದು ಪುಸ್ತಕ, ಕ್ಯಾಷ್ ಬುಕ್ ನಿರ್ವಹಣೆ, ವಾರ್ಷಿಕ ಆಡಳಿತ ವರದಿ ಸಲ್ಲಿಕೆ, ಆಡಳಿತ ಶಾಖೆಗೆ ಸಂಬಂಧಿಸಿದ ಕಡತಗಳ ವಿಲೇವಾರಿ ಅಧಿಕಾರಿಗಳು ವಹಿಸಿದ ಇತರೆ ಕೆಲಸಗಳು.

4) **ದ್ವಿತೀಯ ದರ್ಜೆ ಸಹಾಯಕರು-1**
ಉಗ್ರಾಣ ಶಾಖೆಗೆ ಸಂಬಂಧಿಸಿದ ವ್ಯವಹಾರ, ಆಯಾ ಅವಧಿಗೆ ಸಲ್ಲಿಸಬೇಕಾದ ವರದಿಗಳ ತಯಾರಿಕೆ.

5) **ದ್ವಿತೀಯ ದರ್ಜೆ ಸಹಾಯಕರು-2**
ಸಿಬ್ಬಂದಿ/ಅಧಿಕಾರಿ/ವೇತನ ಬಿಲ್ಲು ತಯಾರಿಕೆ ಹಾಗೂ ಸಲ್ಲಿಕೆ ಆಮದು ಮತ್ತು ರವಾನೆ ವಹಿ ನಿರ್ವಹಣೆ ಸ್ಟಾಂಪ್ ವಹಿ ನಿರ್ವಹಣೆ ಇತ್ಯಾದಿ

6) **ದ್ವಿತೀಯ ದರ್ಜೆ ಸಹಾಯಕರು-3:**

7) **ಬೆರಳಚ್ಚುಗಾರರು:**
ಅಧಿಕಾರಿಗಳು ನೀಡಿದ ಕಾಗದ ಪತ್ರಗಳ ವರದಿಗಳನ್ನು ಬೆರಳಚ್ಚು ಮಾಡುವುದು.

8) **ಕರವಸೂಲಿಗಾರರು:** ನೋಟಿಸುಗಳನ್ನು, ಆದೇಶಗಳನ್ನು ವರ್ತಕರಿಗೆ, ಇತರೆ ಕಛೇರಿಗೆ ಜಾರಿಗೊಳಿಸುವುದು, ಸಲ್ಲಿಸುವುದು.

9) **ಜವಾನರು-1:** ಕಡತ ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಹಾಗೂ ಹೊರಗೆ ಸಂಬಂಧಪಟ್ಟವರಿಗೆ ಸಲ್ಲಿಸುವುದು.

10) **ಜವಾನರು-2:** ಕಡತ ಟಪಾಲು ಇತ್ಯಾದಿಗಳನ್ನು ಶಾಖೆಯ ಒಳಗೆ ಹಾಗೂ ಹೊರಗೆ ಸಂಬಂಧಪಟ್ಟವರಿಗೆ ಸಲ್ಲಿಸುವುದು.

11) **ವಾಹನ ಚಾಲಕರು**-1: ವಾಣಿಜ್ಯ ತೆರಿಗೆಗಳ ಉಪ ಆಯುಕ್ತರ ಹಾಗೂ ಸಹಾಯಕ ಆಯುಕ್ತರ ಜೀಪನ್ನು ಸುಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವುದು. ಮತ್ತು ಕರ್ತವ್ಯ ನಿರ್ವಹಿಸಲು ವಾಹನ ನಡೆಸುವುದು.

**4) ಕಾರ್ಯ ನಿರ್ವಹಿಸುವವರಿಗೆ ಅನುಸರಿಸುವ ಮಾನದಂಡಗಳು:**

ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆ–2003, ಕೇಂದ್ರ ಮಾರಾಟ ತೆರಿಗೆ ಕಾಯ್ದೆ 1956, ಕರ್ನಾಟಕ ಪ್ರವೇಶ ತೆರಿಗೆ ಕಾಯ್ದೆ 1979.

5) ಕಾರ್ಯಗಳನ್ನು ನಿರ್ವಹಿಸುವುದರಲ್ಲಿ ಇಲಾಖೆಯ ಸಿಬ್ಬಂದಿ ಹೊಂದಿರುವ ಅಥವಾ ಉಪಯೋಗಿಸುವ ನಿಯಮಗಳು: ನಿಬಂಧನೆಗಳು ಸೂಚನೆಗಳು ಕೈಪಿಡಿ ಮತ್ತು ದಾಖಲೆಗಳು.

ಅ) ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958.

ಆ) ಖಜಾನೆ ಆರ್ಥಿಕ ಸಂಹಿತೆ ನಿಯಮ.

ಇ) ಖಜಾನೆ ಆರ್ಥಿಕ ಸಂಹಿತೆ.

ಈ) ಸಾದಿಲ್ವಾರು ವೆಚ್ಚದ ಕೈಪಿಡಿ.

ಉ) ಕರ್ನಾಟಕ ನಾಗರೀಕ ಸೇವೆಗಳು (ನಡತೆ ನಿಯಮಗಳು 1966)

ಊ) ಕರ್ನಾಟಕ ನಾಗರೀಕ ಸೇವೆಗಳು (ಸಿಸಿಎ) ನಿಯಮಗಳು 1957.

ಋ) ಕಾರ್ಯಾಲಯ ಕೈಪಿಡಿ.

ಎ) ಸೇವಾ ನಿಯಮಗಳು ಇತ್ಯಾದಿ ವಿಚಾರದಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, ಆರ್ಥಿಕ ಇಲಾಖೆ ವಾ.ತೆ. ಇಲಾಖೆ ಹೊರಡಿಸಿದ ಆದೇಶದ ಸುತ್ತೋಲೆ ಸೂಚನೆಗಳು.

ಏ) ಇಲಾಖೆ ಮುಖ್ಯಸ್ಥರು ಹೊರಡಿಸಿದ ಸುತ್ತೋಲೆ ಮತ್ತು ಆದೇಶಗಳು.

6) ಇಲಾಖೆಯು ಹೊರಡಿಸಿರುವ ದಸ್ತಾವೇಜುಗಳ ಪಟ್ಟಿ:

1) ಕರ ನಿರ್ಧಾರಣೆ/ಮರು ಕರ ನಿರ್ಧರಣೆ ಕೈಗೊಳ್ಳಲಾದ ವರ್ತಕರ ಕಡತಗಳು/ವಹಿ.
2) ಹೆಚ್ಚುವರಿ ತೆರಿಗೆ, ಬಾಕಿ, ದಂಡ, ವಿಧಿಸಿರುವ ವಹಿ.
3) ಮೇಲ್ಮನವಿ ಪ್ರಾಧಿಕಾರಕ್ಕೆ ಸಲ್ಲಿಸಲಾದ ಕಡತಗಳ ವಹಿ.
4) ಎಂ.ಐ.ಎಸ್. ಪ್ರತಿಗಳ ಕಡತ.
5) ದಿನಚರಿ ಸಲ್ಲಿಸಿದ ಕಡತಗಳ ವಿವರ.
6) ಕಛೇರಿ ಆದೇಶ ವಹಿ.
7) ನೌಕರರ ಸೇವಾ ಪುಸ್ತಕಗಳು
8) ಆಮದು ವಹಿ.
9) ರವಾನೆ ವಹಿ.
10) ಸ್ಟಾಂಪ್ ವಹಿ.

7) ನೀತಿ ನಿಯಮಗಳನ್ನು ರೂಪಿಸಲು ಸಾರ್ವಜನಿಕರೊಂದಿಗೆ ಸಮಾಲೋಚಿಸಲು ಅಸ್ತಿತ್ವದಲ್ಲಿರುವ ಕಾರ್ಯ ವಿಧಾನದ ವಿವರಗಳು;

ಸಾರ್ವಜನಿಕ ಮಾಹಿತಿ ಅಧಿಕಾರಿಗಳಾಗಿ ನೇಮಕ ಮಾಡಲಾಗಿದೆ. ಇವರು ಸಂಬಂಧಿಸಿದ ಸಾರ್ವಜನಿಕ ವ್ಯಾಪ್ತಿಗಳಿಂದ ದೂರು ಆಕ್ಷೇಪಣೆಗಳನ್ನು ಆಹ್ವಾನಿಸಿ ಪರಿಶೀಲಿಸುತ್ತಾರೆ.

1) ಶ್ರೀಯುತ ಮೋಹ್ಮದ್ ಮಸ್ಲೆಹುದ್ದಿನ್, ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು
2) ಶ್ರೀಯುತ ಹೆಚ್.ಎಸ್. ಬಸವಪ್ರಭು, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು.
3) ಶ್ರೀಯುತ ವಿಶ್ವನಾಥ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು

ವಾಣಿಜ್ಯ ತೆರಿಗೆಗಳ ಉಪ ಆಯುಕ್ತರು.
(ಆಡಿಟ್)–1, ಡಿ.ವ್ಹಿ.ಓ. ಗುಲಬರ್ಗಾ.

ಪಿಆರ್–1283

**ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ**

**ಸಂಖ್ಯೆ:ವಾಕೈ 12 ಜಕೈಸೇ 2010, ದಿನಾಂಕ:24ನೇ ಆಗಸ್ಟ್ 2010**

**ಅಧಿಸೂಚನೆ**

**ವಿಷಯ:** ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳೀ ಪ್ರವರ್ಧನಾಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ ಕುರಿತು

ಕೈಮಗ್ಗ ಮತ್ತು ಜವಳೀ ಇಲಾಖೆಯ ಜವಳಿ ಪ್ರವರ್ಧನಾಧಿಕಾರಿಗಳ ವೃಂದದ ಕರಡು ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2010 ರಲ್ಲಿದ್ದಂತೆ ದಿನಾಂಕ:27–7–2010 ರಂದು ಪ್ರಕಟಿಸಿ, ನಿಗಧಿಪಡಿಸಿರುವ ಜೇಷ್ಠತೆಗೆ ಸಂಬಂಧಿಸಿದಂತೆ ಬಾಧಿತ ಅಧಿಕಾರಿಗಳಿಂದ ಆಕ್ಷೇಪಣೆ/ಸಲಹೆಗಳಿದ್ದಲ್ಲಿ ಅವುಗಳನ್ನು ಸದರಿ ಅಧಿಸೂಚನೆ ಪ್ರಕಟಿಸಿದ 15 ದಿನಗಳ ಕಾಲಾವಕಾಶ ನೀಡಿ, ಕರೆಯಲಾಗಿತ್ತು. ಈ ಬಗ್ಗೆ ಬಂದಿರುವ ಆಕ್ಷೇಪಣೆ/ಸಲಹೆಗಳನ್ನು ಸರ್ಕಾರವು ಪರಿಶೀಲಿಸಿದ್ದು, ಜವಳಿ ಪ್ರವರ್ಧನಾಧಿಕಾರಿಗಳ ವೃಂದದ ದಿನಾಂಕ:01–01–2010ರಲ್ಲಿದ್ದಂತೆ ಅಂತಿಮ ಜೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಗಣಪತಿ,**

ಸರ್ಕಾರದ ಉಪ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ದಿನಾಂಕ:01–01–2010ರಲ್ಲಿದ್ದಂತೆ ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ಪ್ರವರ್ಧನಾಧಿಕಾರಿಗಳ ಅಂತಿಮ ಜೇಷ್ಠತಾ ಪಟ್ಟಿ**

**ವೇತನ ಶ್ರೇಣಿ ರೂ.10800–20025**

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀಯುತರಾದ | ನೇರ ನೇಮಕಾತಿ ಮುಂಬಡ್ತಿ ಇತರೆ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಮುಂಬಡ್ತಿ/ ಸೇರಿದ ದಿನಾಂಕ | ಜೇಷ್ಠತೆಗೆ ಅರ್ಹತಾ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1 | ಜಿ.ಟಿ ಕುಮಾರ್ | ಮುಂಬಡ್ತಿ | 27–07–1959 | 16–01–1986 | 03–01–2003 | 12–09–2001 | – |
| 2 | ಕೀರ್ತಪ್ಪ ಗೋಟೂರು | ಮುಂಬಡ್ತಿ | 05–05–1963 | 12–09–1988 | 03–01–2003 | 28–02–2008 | – |
| 3 | ಮಲ್ಲಪ್ಪ ಜಿ. ಕೊಣ್ಣೂರು | ಮುಂಬಡ್ತಿ | 01–04–1964 | 12–09–1988 | 03–01–2003 | 28–02–2008 | – |
| 4 | ಶಿವಕುಮಾರ್ | ಮುಂಬಡ್ತಿ | 20–06–1964 | 12–09–1988 | 03–01–2003 | 28–02–2008 | – |
| 5 | ಸುರೇಶ್ ಎನ್. ತಡಕನಹಳ್ಳಿ | ಮುಂಬಡ್ತಿ | 15–12–1962 | 12–09–1988 | 03–01–2003 | 28–02–2008 | – |
| 6 | ಕಾಶೀನಾಥ ಎಂ. ಭಾವಿಕಟ್ಟಿ | ಮುಂಬಡ್ತಿ | 15–07–1962 | 12–09–1988 | 02–04–2008 | 28–02–2008 | – |
| 7 | ಎಸ್.ಎಸ್. ಬೆನಕಲ್ | ಮುಂಬಡ್ತಿ | 01–06–1961 | 12–09–1988 | 28–02–2008 | 28–02–2008 | – |
| 8 | ಯೋಗೀಶ್ | ಮುಂಬಡ್ತಿ | 05–01–1964 | 12–09–1988 | 28–02–2008 | 28–02–2008 | – |
| 9 | ಬಿ.ಆರ್. ರಾಜಕುಮಾರ್ | ಮುಂಬಡ್ತಿ | 06–01–1962 | 12–09–1988 | 29–12–2008 | 25–10–2008 | – |
| 10 | ಎಸ್.ಐ. ಸಣಕಲ್ | ಮುಂಬಡ್ತಿ | 01–06–1964 | 12–09–1988 | 08–11–2008 | 25–10–2008 | – |
| 11 | ಎ. ಧರಣೇಶ್ | ಮುಂಬಡ್ತಿ | 15–07–1964 | 12–09–1988 | 20–11–2008 | 25–10–2008 | – |
| 12 | ಹೆಚ್.ಬಿ. ಪಾಟೀಲ್ | ಮುಂಬಡ್ತಿ | 01–05–1967 | 12–09–1988 | 03–11–2008 | 25–10–2008 | – |
| 13 | ಎನ್. ಶಶಿಧರ | ಮುಂಬಡ್ತಿ | 17–11–1967 | 12–09–1988 | 31–10–2008 | 25–10–2008 | – |
| 14 | ಪಿ.ಕೆ. ಪರಪ್ಪ | ಮುಂಬಡ್ತಿ | 18–10–1961 | 12–09–1988 | 30–10–2008 | 25–10–2008 | – |
| 15 | ಅಜಿತ್ ಜಿ. ನಾಯಕ್ | ಮುಂಬಡ್ತಿ | 22–07–1967 | 12–09–1988 | 12–02–2009 | 25–10–2008 | – |

**ಎಂ.ಎಸ್. ಗಣಪತಿ,**
ಸರ್ಕಾರದ ಉಪ ಕಾರ್ಯದರ್ಶಿ,
(ಜವಳಿ, ಸಿ & ಸಿ ಮತ್ತು ಐಆರ್)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿಆರ್–1313

**ಕರ್ನಾಟಕ ಸರ್ಕಾರ**

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯನಿರ್ವಾಹಕ ಅಭಿಯಂತರ ರವರ ಕಛೇರಿ ಸಣ್ಣ ನೀರಾವರಿ ವಿಭಾಗ, ಕುಷ್ಟಗಿ**

**ಸಂಖ್ಯೆ:ಕಾನಿಅ/ಸನೀವಿ/ಕು/ಸಿ–1/2010–11/1627, ದಿನಾಂಕ:20ನೇ ಆಗಸ್ಟ್ 2010,**

**ಅಧಿಸೂಚನೆ**

2005ರ ಮಾಹಿತಿ ಹಕ್ಕು ಅಧಿನಿಯಮ (2005ರ ಕೇಂದ್ರ ಕಾಯ್ದೆ 22) ರ ಅಡಿಯಲ್ಲಿ ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. ಕಛೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸದರಿ ಅಧಿನಿಯಮದ ಸೆಕ್ಷನ್ 5(1) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡಂತೆ ಅಧಿಕಾರಿಗಳನ್ನು "ಸಾರ್ವಜನಿಕ ಮಾಹಿತಿ ಅಧಿಕಾರಿ" ಹಾಗೂ ಸೆಕ್ಷನ್ 19(1) ರಡಿಯಲ್ಲಿ "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

| ಕ್ರ ಸಂ | ಕಛೇರಿ ಮತ್ತು ವಿಳಾಸ | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ 5(1) | ಸಾರ್ವಜನಿಕ ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ 5(2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ 19(1) |
|---|---|---|---|---|
| 1 | 2 | 3 | 4 | 5 |
| | ಕಾರ್ಯನಿರ್ವಾಹಕ ಅಭಿಯಂತರು ಸಣ್ಣ ನೀರಾವರಿ ವಿಭಾಗ, ಕುಷ್ಟಗಿ ಮೋ:08536–267054 ಫ್ಯಾಕ್ಸ : 08536–267054 | ಶ್ರೀ ಟಿ.ಜಯಾನಂದಂ ಕಾರ್ಯನಿರ್ವಾಹಕ ಅಭಿಯಂತರು, ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಶ್ರೀ ಕೆ.ಕೆ.ಜೈನಾಪೂರ ತಾಂತ್ರಿಕ ಸಹಾಯಕರು, ಕಾರ್ಯನಿರ್ವಾಹಕ ಅಭಿಯಂತರವರ ಕಛೇರಿ ಸಣ್ಣ ನೀರಾವರಿ ವಿಭಾಗ, ಕುಷ್ಟಗಿ. | ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಗುಲ್ಬರ್ಗಾ. 08472–221466 |

**ಟಿ.ಜಯಾನಂದಂ,**
ಕಾರ್ಯನಿರ್ವಾಹಕ ಅಭಿಯಂತರು,
ಸಣ್ಣ ನೀರಾವರಿ ವಿಭಾಗ, ಕುಷ್ಟಗಿ

ಪಿಆರ್–1305

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ.**

**ಉಪಸ್ಥಿತರು:** ಶ್ರೀ ರೊಟ್ಟಿ ಮಲ್ಲಿಕಾರ್ಜುನ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ: KA-04-E-219 (ಮೋ/ಸೈ) ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1. ಮಾಲೀಕರ ಅರ್ಜಿ ದಿನಾಂಕ: 21–07–2010

2. ಮೋ.ವಾ.ನಿ. ರವರ ವರದಿ ದಿನಾಂಕ: 29–07–2010

**ಪ್ರಸ್ತಾವನೆ:**

ವಾಹನ ಸಂಖ್ಯೆ: KA-04-E-219 (ಮೋ/ಸೈ.) ರ ಮಾಲೀಕರಾದ Sri P. Ravindranathan, No.9, "Ragam", 3rd Cross, 13th Main, M.K. Extn., Bangalore-560 054 ರವರು ದಿನಾಂಕ:21–07–2010 ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನವು ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ಹಾಗೂ ದುರಸ್ತಿ ಮಾಡಲಾರದ ಸ್ಥಿತಿಯಲ್ಲಿರುವುದರಿಂದ ನೋಂದಣಿಯನ್ನು ರದ್ದುಪಡಿಸಲು ಅನುಮತಿ ಕೋರಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ:29–07–2010 ರಂದು ವರದಿ ಸಲ್ಲಿಸಿದ್ದು, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಬಹುದು ಎಂದು ಶಿಫಾರಸ್ಸು ಮಾಡಿರುತ್ತಾರೆ. ವಾಹನದ ತೆರಿಗೆಯು ಜೀವಾವಧಿವರೆಗೆ ಪಾವತಿಯಾಗಿರುತ್ತದೆ. ಈ ಮೇಲ್ಕಂಡ ಕಾರಣಗಳಿಂದ ಮೋಟಾರು ವಾಹನ ಸಂಖ್ಯೆ: KA-04-E-219 (ಮೋ/ಸೈ) ರ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ:ಪ್ರಾ.ಸಾ.ಅ./ಬೆಂ(ಉ),/ KA-04-E-219/10-11, ದಿನಾಂಕ:12–08–2010**

1988 ರ ಕೇಂದ್ರ ಮೋಟಾರು ವಾಹನ ಕಾಯ್ದೆ ವಿಧಿ 55 (2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರೊಟ್ಟಿ ಮಲ್ಲಿಕಾರ್ಜುನ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ ಆದ ನಾನು ಮೇಲ್ಕಂಡ ಕಾರಣಗಳಿಂದಾಗಿ ಮೋಟಾರು ವಾಹನ ಸಂಖ್ಯೆ: KA-04-E-219 ರ ಮೇಲೆ ಮುಂದೆ ಏನಾದರೂ ತೆರಿಗೆ, ಆಡಿಟ್ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಮಾಡಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1 | ಮೋಟಾರು ವಾಹನದ ಸಂಖ್ಯೆ | KA-04-E-219 |
| 2 | ವಾಹನದ ನೋಂದಣಿ ದಿನಾಂಕ | 06-01-1990 |
| 3 | ವಾಹನದ ತಯಾರಕನ ಹೆಸರು | B.A. Ltd., |
| 4 | ವಾಹನದ ವರ್ಗ | M/Cycle |
| 5 | ವಾಹನದ ಮಾದರಿ | Solo |
| 6 | ವಾಹನದ ತಯಾರಿಕೆ ವರ್ಷ | 1990 |
| 7 | ಚಾಸಿಸ್ ಸಂಖ್ಯೆ | O5C 718615 |
| 8 | ಇಂಜಿನ್ ಸಂಖ್ಯೆ | O5E 748684 |
| 9 | ಇಂಧನ | Petrol |
| 10 | ಅಶ್ವಶಕ್ತಿ | 150 CC |
| 11 | ಆಸನ ಸಾಮರ್ಥ್ಯ | 2 |
| 12 | ಮಾಲೀಕರ ಹೆಸರು ಮತ್ತು ವಿಳಾಸ | Sri P. Ravindranathan, No.9, "Ragam", 3rd Cross, 13th Main, M.K. Extn., Bangalore-560 054. |

**ರೊಟ್ಟಿ ಮಲ್ಲಿಕಾರ್ಜುನ,**

ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ,

ಪಿಆರ್–1362 ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ)

**ನೋಂದಣಿ ಪ್ರಾಧಿಕಾರ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿ, ಬೆಂಗಳೂರು (ಉತ್ತರ), ಯಶವಂತಪುರ, ಬೆಂಗಳೂರು–22, ಇವರ ಕಛೇರಿ ನಡಾವಳಿ.**

**ಉಪಸ್ಥಿತರು:** ಶ್ರೀ ರೊಟ್ಟಿ ಮಲ್ಲಿಕಾರ್ಜುನ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ).

**ವಿಷಯ:** ವಾಹನ ಸಂಖ್ಯೆ: CKL-8210 (LMV) ರ ನೋಂದಣಿ ರದ್ಧತಿ ಬಗ್ಗೆ.

**ಉಲ್ಲೇಖ:** 1. ಮಾಲೀಕರ ಅರ್ಜಿ ದಿನಾಂಕ: 12–11–2009

2. ಮೋ.ವಾ.ನಿ. ರವರ ವರದಿ ದಿನಾಂಕ: 20–10–2009.

**ಪ್ರಸ್ತಾವನೆ:**

ವಾಹನ ಸಂಖ್ಯೆ: CKL-8210 (LMV) ರ ಮಾಲೀಕರಾದ The Income Tax Officer (Protocol) for Chief Commissioner of Income Tax, Income Tax Department, Central Revenue Building, Queen's Road, Bangalore-01 ರವರು ದಿನಾಂಕ:12–11–2009 ರಂದು ಈ ಕಛೇರಿಗೆ ಅರ್ಜಿ ಸಲ್ಲಿಸಿ, ವಾಹನವು ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ಹಾಗೂ ದುರಸ್ತಿ ಮಾಡಲಾರದ ಸ್ಥಿತಿಯಲ್ಲಿರುವುದರಿಂದ ನೋಂದಣಿಯನ್ನು ರದ್ದುಪಡಿಸಲು ಅನುಮತಿ ಕೋರಿರುತ್ತಾರೆ. ಈ ಕಛೇರಿಯ ಮೋಟಾರು ವಾಹನ ನಿರೀಕ್ಷಕರು ವಾಹನವನ್ನು ಪರೀಕ್ಷಿಸಿ, ದಿನಾಂಕ:20–10–2009 ರಂದು ವರದಿ ಸಲ್ಲಿಸಿದ್ದು, ವಾಹನವು ದುರಸ್ತಿ ಮಾಡಲಾಗದ ಸ್ಥಿತಿಯಲ್ಲಿದ್ದು, ರಸ್ತೆಯಲ್ಲಿ ಓಡಾಡಲು ಯೋಗ್ಯವಾಗಿಲ್ಲದ ಕಾರಣ ವಾಹನದ ನೋಂದಣಿಯನ್ನು ರದ್ದುಪಡಿಸಬಹುದು ಎಂದು ಶಿಫಾರಸ್ಸು ಮಾಡಿರುತ್ತಾರೆ. ವಾಹನದ ತೆರಿಗೆಯು ದಿನಾಂಕ:31–01–2010 ರವರೆಗೆ ಪಾವತಿಯಾಗಿರುತ್ತದೆ. ಈ ಮೇಲ್ಕಂಡ ಕಾರಣಗಳಿಂದ ಮೋಟಾರು ವಾಹನ ಸಂಖ್ಯೆ: CKL-8210 (LMV)ರ ನೋಂದಣಿಯನ್ನು ರದ್ದುಪಡಿಸಲು ಈ ಕೆಳಗಿನಂತೆ ಆದೇಶಿಸಿರುತ್ತೇನೆ.

**ಆದೇಶ ಸಂಖ್ಯೆ:ಪ್ರಾ.ಸಾ.ಅ./ಬೆಂ(ಉ),/ CKL-8210/09-10, ದಿನಾಂಕ:18–12–2009**

ಕೇಂದ್ರ ಮೋಟಾರು ವಾಹನ ಕಾಯ್ದೆ 1988ರ ವಿಧಿ 55 (2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರೊಟ್ಟಿ ಮಲ್ಲಿಕಾರ್ಜುನ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ ಹಾಗೂ ನೋಂದಣಿ ಪ್ರಾಧಿಕಾರಿ ಆದ ನಾನು, ಮೇಲ್ಕಂಡ ಕಾರಣಗಳಿಂದಾಗಿ, ಮೋಟಾರು ವಾಹನ ಸಂಖ್ಯೆ: CKL-8210 (LMV) ರ ಮೇಲೆ ಏನಾದರೂ ತೆರಿಗೆ, ಆಡಿಟ್ ಇಲಾಖಾ ಪ್ರಕರಣಗಳು ಬಾಕಿ ಇರುವುದು ಕಂಡು ಬಂದರೆ ಅದನ್ನು ವಾಹನದ ಮಾಲೀಕರೇ ಕಟ್ಟಬೇಕೆಂಬ ನಿಬಂಧನೆಯೊಂದಿಗೆ ಸದರಿ ವಾಹನದ ನೋಂದಣಿಯನ್ನು ರದ್ದು ಮಾಡಿರುತ್ತೇನೆ.

**ವಾಹನದ ವಿವರಗಳು**

| | | |
|---|---|---|
| 1 | ಮೋಟಾರು ವಾಹನದ ಸಂಖ್ಯೆ | CKL-8210 (LMV) |
| 2 | ವಾಹನದ ನೋಂದಣಿ ದಿನಾಂಕ | 05-02-1987 |
| 3 | ವಾಹನದ ತಯಾರಕನ ಹೆಸರು | Mahindra & Mahindra Ltd., |
| 4 | ವಾಹನದ ವರ್ಗ | LMV Omni Bus for Pvt. Use |
| 5 | ವಾಹನದ ಮಾದರಿ | Mini Bus |
| 6 | ವಾಹನದ ತಯಾರಿಕೆ ವರ್ಷ | 1987 |
| 7 | ಚಾಸಿಸ್ ಸಂಖ್ಯೆ | FJ 460 DP 2DP DJ 31893 |
| 8 | ಇಂಜಿನ್ ಸಂಖ್ಯೆ | DJ 34893 |
| 9 | ಅಶ್ವಶಕ್ತಿ | 20.100 |
| 10 | ಆಸನದ ಸಾಮರ್ಥ್ಯ | 16 |
| 11 | ಮಾಲೀಕರ ಹೆಸರು ಮತ್ತು ವಿಳಾಸ | The Income Tax Officer (Protocol) for Chief Commissioner of Income Tax, Income Tax Department Central Revenue Building, Queen's Road, Bangalore-01 |

**ರೊಟ್ಟಿ ಮಲ್ಲಿಕಾರ್ಜುನ,**
ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿ,
ಹಾಗೂ ನೋಂದಣಿ ಪ್ರಾಧಿಕಾರ, ಬೆಂಗಳೂರು (ಉತ್ತರ)

ಪಿಆರ್–1363

**ಕರ್ನಾಟಕ ಅರಣ್ಯ ಇಲಾಖೆ**

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ಅರಣ್ಯ ಪಡೆ ಮುಖ್ಯಸ್ಥರು) ರವರ ಕಛೇರಿ**

**ಅರಣ್ಯ ಭವನ, ಮಲ್ಲೇಶ್ವರಂ**

**ಸಂಖ್ಯೆ:ಬಿ3/ಸೇಲ್ಸ್/ಸೀನಿಯರೇಜ್ ದರ–9/09–10/ ಬೆಂಗಳೂರು, ದಿನಾಂಕ:21/27ನೇ ಸೆಪ್ಟೆಂಬರ್ 2010**

**ಅಧಿಕೃತ ಜ್ಞಾಪನ ಪತ್ರ**

**ವಿಷಯ :** ಮರಗಳ ಮತ್ತಿತರ ಅರಣ್ಯ ಉತ್ಪತ್ತಿಯ ಮೇಲಿನ ಟಂಕತನ ತೀರುವಳಿ ದರಗಳನ್ನು (ಸೀನಿಯರೇಜ್ ದರ) ಪರಿಷ್ಕರಿಸುವ ಬಗ್ಗೆ

**ಉಲ್ಲೇಖ:** 1. ಸರ್ಕಾರದ ಪತ್ರ ಸಂಖ್ಯೆ:ಅಪಜೀ 149 ಎಫ್‌ಡಿಪಿ 2003 ದಿನಾಂಕ:17–08–2007

2. ಈ ಕಛೇರಿಯ ಅಧಿಕೃತ ಜ್ಞಾಪನ ಸಂಖ್ಯೆ:ಎ6(ಎ)/ಸಿಆರ್–33/ಸೀನಿಯರೇಜ್ ದರ/06–07 ದಿನಾಂಕ:14–01–2008.
3. ಈ ಕಛೇರಿಯ ಸಮ ಸಂಖ್ಯೆ ಅಧಿಕೃತ ಜ್ಞಾಪನ ದಿನಾಂಕ:11/13–01–2010 & 22–01–2010.
4. ದಿನಾಂಕ:20–02–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು

5. ದಿನಾಂಕ:15–05–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳು
6. ಈ ಕಛೇರಿಯ ಪತ್ರದ ಸಂಖ್ಯೆ:ಬಿ3/ಸೇಲ್ಸ್/ಸೀನಿಯರೇಜ್ ದರ–9/2009–10 ದಿನಾಂಕ:06/15–06–2010

**ಪ್ರಸ್ತಾವನೆ:**

ಮರಗಳ ಮತ್ತಿತರ ಅರಣ್ಯ ಉತ್ಪತ್ತಿಯ ಮೇಲಿನ ಟಂಕತನ ತೀರುವಳಿ (ಸೀನಿಯರೇಜ್) ದರಗಳನ್ನು ಉಲ್ಲೇಖ (2)ರಲ್ಲಿ ಓದಲಾಗಿರುವ ಆದೇಶದಲ್ಲಿ ದಿನಾಂಕ:01–01–2008 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಿ ಆದೇಶ ಹೊರಡಿಸಿದ್ದು, ಉಲ್ಲೇಖ (1)ರ ಪತ್ರದಲ್ಲಿ ಪ್ರತಿ ಎರಡು ವರ್ಷಕ್ಕೊಮ್ಮೆ ಟಂಕತನ ತೀರುವಳಿ ದರಗಳನ್ನು ಪರಿಷ್ಕರಿಸಬೇಕಾಗಿದ್ದು, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ರವರಿಗೆ ಈ ಬಗ್ಗೆ ಅಧಿಕಾರ ನೀಡಿರುವುದರಿಂದ, ಅದರಂತೆ ಉಲ್ಲೇಖ (3)ರ ಪತ್ರದಲ್ಲಿ ವಿವಿಧ ಅರಣ್ಯ ಉತ್ಪನ್ನಗಳ ಪರಿಷ್ಕರಿಸಿದ ಟಂಕತನ ತೀರುವಳಿ ದರಗಳನ್ನು ದಿನಾಂಕ:01–01–2010 ರಿಂದ ಅನ್ವಯವಾಗುವಂತೆ ಜಾರಿಗೊಳಿಸಿ ಆದೇಶ ನೀಡಲಾಗಿತ್ತು. ಉಲ್ಲೇಖ (4) ರಲ್ಲಿ ದಿನಾಂಕ:20–02–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಜರುಗಿದ ಸಭೆಯ ನಡವಳಿಯಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮವು ಟಂಕತನ ತೀರುವಳಿ ದರಗಳನ್ನು ಪರಿಷ್ಕರಿಸಲು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ಇವರು ದಿನಾಂಕ:23–01–2010 ರ ಪತ್ರದಲ್ಲಿ ಕೋರಿಕೆ ಸಲ್ಲಿಸಿರುವುದನ್ನು ಚರ್ಚಿಸಿ ಕರ್ನಾಟಕ ರಾಜ್ಯದ ಅರಣ್ಯ ಪ್ರದೇಶಗಳಲ್ಲಿ ಅದರಲ್ಲೂ ವಿಶೇಷವಾಗಿ ಪಶ್ಚಿಮಘಟ್ಟ ಅರಣ್ಯ ಪ್ರದೇಶಗಳಲ್ಲಿ ಬಹುತೇಕವಾಗಿ ಅಪಾರ ಪ್ರಮಾಣದಲ್ಲಿ ಬಿದಿರು ಹೂಬಿಟ್ಟು ಒಣಗುತ್ತಿರುವುದರಿಂದ / ಒಣಗಿರುವುದರಿಂದ ಪೇಪರ್‌ಮಿಲ್ಸ್‌ಗಳಿಗೆ ಬಿದಿರಿನ ಲಭ್ಯತೆಯು ಅಧಿಕವಾಗಿದ್ದು, ಮಾರುಕಟ್ಟೆಯಲ್ಲಿ ನೀಲಗಿರಿ ಮತ್ತು ಅಕೇಶಿಯಾ ಆರಿಕ್ಯುಲಿಫಾರ್ಮಿಸ್ ಪಲ್ಪ್‌ವುಡ್‌ಗೆ ಬೇಡಿಕೆ ಕಡಿಮೆಯಾಗಿರುತ್ತದೆ. ಆದ ಪ್ರಯುಕ್ತ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಹೆಚ್ಚಿಸಿರುವ ಟಂಕತನ ತೀರುವಳಿ ದರದಲ್ಲಿ ಖರೀದಿಸಲು ಪೇಪರ್ ಮಿಲ್‌ಗಳು ಮುಂದೆ ಬಾರದೇ ಇರುವುದರಿಂದ ಹಾಗೂ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಅಸ್ತಿತ್ವ ಮತ್ತು ಆಡಳಿತವನ್ನು ಗಮನದಲ್ಲಿಟ್ಟುಕೊಂಡು ನೀಲಗಿರಿ ಮತ್ತು ಅಕೇಶಿಯಾ ಪಲ್ಪ್‌ವುಡ್‌ಗೆ ಈ ಹಿಂದಿನ ಟಂಕತನದ ತೀರುವಳಿ ದರಗಳನ್ನು ದಿನಾಂಕ:30–06–2010 ರ ವರೆಗೆ ಅಥವಾ ನಿಗಮದವರು ಸಂಬಂಧಿಸಿದ ಕೈಗಾರಿಕಾ ಸಂಸ್ಥೆಗಳೊಂದಿಗೆ ಮಾಡಿಕೊಂಡಿರುವ ಕರಾರುಗಳ ಅನ್ವಯ ಪಲ್ಪ್‌ವುಡ್‌ನ್ನು ಸರಬರಾಜು ಮಾಡಿ ಮುಗಿಸುವ ಅವಧಿ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಸದರಿ ಸಭೆಯಲ್ಲಿ ತೀರ್ಮಾನ ತೆಗೆದುಕೊಂಡು ಅದರಂತೆ ಮುಂದಿನ ಕ್ರಮಕ್ಕಾಗಿ ಎಲ್ಲಾ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ರವಾನಿಸಲಾಗಿತ್ತು. ಮುಂದುವರಿದು ಉಲ್ಲೇಖ (5)ರಲ್ಲಿ ದಿನಾಂಕ:15–5–2010 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆರವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಗಳಲ್ಲಿ, ಈ ಕಛೇರಿಯ ಅಧಿಕೃತ ಜ್ಞಾಪನಾ ಪತ್ರದ ಸಮ ಸಂಖ್ಯೆ ದಿನಾಂಕ:11/13–01–2010 ರಲ್ಲಿ ನೀಲಗಿರಿ ಮತ್ತು ಅಕೇಶಿಯಾ ಅರಿಕ್ಯುಲಿಫಾರ್ಮಿಸ್ ಪಲ್ಪ್‌ವುಡ್‌ಗೆ ದರ ಹೆಚ್ಚುವರಿ ಮಾಡಿರುವುದಕ್ಕೆ ಯಾವುದೇ ತಳಹದಿ ಇರುವುದಿಲ್ಲವೆಂದು ಚರ್ಚೆಯಲ್ಲಿ ತಿಳಿದು ಬಂದಿರುವುದರಿಂದ, ಈ ಬಗ್ಗೆ ಎಲ್ಲಾ ಮಾಹಿತಿಯನ್ನು ಸಂಗ್ರಹಿಸಿ ದಾಖಲೆಗಳನ್ನು ಹಾಗೂ ದರಗಳನ್ನು ಸರಿಯಾದ ರೀತಿಯಲ್ಲಿ ಪರಿಶೀಲಿಸಿ ನೀಲಗಿರಿ ಮತ್ತು ಅಕೇಶಿಯಾ ಅರಿಕ್ಯುಲಿಫಾರ್ಮಿಸ್ ಪಲ್ಪ್‌ವುಡ್‌ನ ಟಂಕತನ ತೀರುವಳಿ (ಸೀನಿಯರೇಜ್) ದರಗಳನ್ನು ಪರಿಷ್ಕರಿಸಲು ಸೂಚಿಸಿರುತ್ತಾರೆ.

ಅದರಂತೆ, ಉಲ್ಲೇಖ (6)ರ ಪತ್ರದಲ್ಲಿ ಟಂಕತನ ತೀರುವಳಿ ದರಗಳನ್ನು ಪರಿಷ್ಕರಿಸುವ ಸಂಬಂಧ ಸಮಿತಿ ರಚನೆ ಮಾಡಿ ಸಮಿತಿಯು ತೊಗಟೆ ರಹಿತ ನೀಲಗಿರಿ ಮತ್ತು ಅಕೇಶಿಯಾ ಪಲ್ಸ್‌ವುಡ್‌ಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ. 1,142/– ಮತ್ತು ತೊಗಡೆ ಸಹಿತ ನೀಲಗಿರಿ ಮತ್ತು ಅಕೇಶಿಯಾ ಪಲ್ಪ್‌ವುಡ್‌ಗೆ ಪ್ರತಿ ಮೆಟ್ರಿಕ್ ಟನ್‌ಗೆ ರೂ. 982/– ಗಳಂತೆ ನಿಗಧಿಪಡಿಸಲು ಶಿಫಾರಸ್ಸು ಮಾಡಿತ್ತು. ಸದರಿ ಸಮಿತಿಯ ಶಿಫಾರಸ್ಸುಗಳನ್ನು ಪರಿಶೀಲಿಸಿ, ಸಮಂಜಸವೆಂದು ತೀರ್ಮಾನಿಸಿ, ಈ ಕಛೇರಿಯ ಅಧಿಕೃತ ಜ್ಞಾಪನಾ ಪತ್ರದ ಸಂಖ್ಯೆ ದಿನಾಂಕ:11/13–01–2010 ಅನ್ನು ಭಾಗಶ: ಮಾರ್ಪಡಿಸಿ ಈ ಕೆಳಕಂಡಂತೆ ಆದೇಶ.

**ಆದೇಶ**

| ಕ್ರ.ಸಂ. | ಮರದ ಜಾತಿ | ಸಮಿತಿಯ ವರದಿಯನ್ವಯ ಪರಿಷ್ಕರಿಸಿ ಈಗ ನಿಗದಿಪಡಿಸಿದ ತೆಂಕಣ ತೀರುವಳಿ ದರ ಪ್ರತಿ ಮೆಟ್ರಿಕ್ ಟನ್‌ಗೆ |
|---|---|---|
| 124(a) | ನೀಲಗಿರಿ (ತೊಗಟೆ ರಹಿತ) | ರೂ. 1,142/– |
| | ನೀಲಗಿರಿ (ತೊಗಟೆ ಸಹಿತ) | ರೂ. 982/– |
| 124(b) | ಅಕೇಶಿಯಾ ಆರಿಕ್ಯುಲಿಫಾರ್ಮಿಸ್ (ತೊಗಟೆ ರಹಿತ) | ರೂ. 1,142/– |
| | ಅಕೇಶಿಯಾ ಅರಿಕ್ಯುಲಿಫಾರ್ಮಿಸ್ (ತೊಗಟೆ ಸಹಿತ) | ರೂ. 982/– |

ಈ ಆದೇಶವು ದಿನಾಂಕ:01–07–2010 ರಿಂದ ಪೂರ್ವಾನ್ವಯವಾಗುತ್ತದೆ.

**ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,**
(ಅರಣ್ಯ ಪಡೆ ಮುಖ್ಯಸ್ಥರು),

ಪಿಆರ್–1468

**ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಇವರ ನಡವಳಿ**

**ಸಂಖ್ಯೆ:ಸಿಬ್ಬಂದಿ,ಶಿಸ್ತು. ಟ್ರ್ಯಾಪ್.6/2005–06 ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2010**

**ವಿಷಯ :** ಶ್ರೀ ಎಂ.ಎಸ್. ಧನಂಜಯ, ತಪಾಸಕರು, ತಹಶೀಲ್ದಾರ್ ಕಛೇರಿ, ಕುಂದಾಪುರ ಇವರ ವಿರುದ್ಧದ ಟ್ರ್ಯಾಪ್ ಪ್ರಕರಣ– ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಉಲ್ಲೇಖ:** 1. ಅಪರ ಪೋಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ:ಲೋಕ್/ ಐಎನ್‌ವಿ(ಜಿ)/ಎಂ–6/ಸಿಆರ್–1/2005 ಉಡುಪಿ ದಿನಾಂಕ:13–8–2010.

2. ಅಪರ ಆರಕ್ಷಕ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ:ಎಲ್‌ಓಕೆ/ ಐಎನ್‌ವಿ (ಜಿ)/ಎಂ–6/ಸಿಆರ್–1/2005 ಉಡುಪಿ ದಿನಾಂಕ:23–7–2005.

3. ಅಮಾನತ್ತುಗೊಳಿಸಿದ ಈ ಕಛೇರಿ ಸಮಸಂಖ್ಯೆ ನಡೆವಳಿ ದಿನಾಂಕ:9–8–2005.

4. ಅಭಿಯೋಜನಾ ಮಂಜೂರಾತಿಯನ್ನು ನೀಡಿದ ಈ ಕಛೇರಿ ಸಮಸಂಖ್ಯೆ ನಡೆವಳಿ ದಿನಾಂಕ:9–8–2006.

5. ಸರ್ಕಾರದ ಆದೇಶ ಸಂಖ್ಯೆ:ಕಂಇ.15.ಭೂದಾಸೇ (3) 2010 ದಿನಾಂಕ:10–2–2010.

6. ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಆದೇಶ ಸ್ಪೆಷಲ್ ಕೇಸ್ ನಂ.25/2006 ದಿನಾಂಕ:7–5–2010.

7. ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ.9.ಸೇಇವಿ.95 ಬೆಂಗಳೂರು ದಿನಾಂಕ:26–6–1996.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ಧನಂಜಯ, ತಪಾಸಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಮರುಭೂಮಾಪನ, ಬೆಳಗಾಂ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರು ತಹಶೀಲ್ದಾರ್, ಕುಂದಾಪುರ ಕಛೇರಿಯಲ್ಲಿದ್ದಾಗ, ಫಿರ್ಯಾದಿಯಾದ ಶ್ರೀ ಎಂ.ವಿ. ರಂಜಿತ್, ಮುಕುಂದ ಮರತ್ ಮನೆ, ಮುದೂರು, ಕುಂದಾಪುರ ತಾಲ್ಲೂಕು ಇವರ ಮುದೂರು ಗ್ರಾಮದ ಸ.ನಂ. 36/1 ರ ಜಮೀನನ್ನು ಭೂಮಾಪಕರು ಅಳತೆ ಮಾಡಿದ್ದು, ಅಳತೆ ಮಾಡಿದ ಅಧಿಕೃತ ದಾಖಲೆಗಳನ್ನು ಮಾಡಿಕೊಡಲು ರೂ.500–00 ಗಳ ಲಂಚದ ಹಣಕ್ಕೆ ಒತ್ತಾಯಿಸಿ, ದಿನಾಂಕ:12–7–2005 ರಂದು ತಾಲ್ಲೂಕು ಕಛೇರಿ ಕುಂದಾಪುರದಲ್ಲಿ ರೂ.500–00 ಗಳ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರವರು ಬೀಸಿದ ಟ್ರ್ಯಾಪ್ ಪ್ರಕರಣದಲ್ಲಿ ಸಿಲುಕಿರುವ ಬಗ್ಗೆ ಉಲ್ಲೇಖ (2)ರ ಕರ್ನಾಟಕ ಲೋಕಾಯುಕ್ತರವರ ಪತ್ರದ ಮೇರೆಗೆ, ಈ ಕಛೇರಿ ನಡೆವಳಿ ದಿನಾಂಕ:9–9–2005 ರಲ್ಲಿ ಆರೋಪಿತರನ್ನು ಅಮಾನತ್ತುಗೊಳಿಸಿದ್ದು. ದಿನಾಂಕ:13–9–2006 ರ ನೆಡವಳಿಯಲ್ಲಿ, ಟ್ರ್ಯಾಪ್ ಪ್ರಕರಣದ ಇತ್ಯರ್ಥ ಕಾಯ್ದಿರಿಸಿ ಅಮಾನತ್ತಿನಿಂದ ತೆರವುಗೊಳಿಸಿ ತಹಶೀಲ್ದಾರ್, ತರೀಕೆರೆ ಕಛೇರಿಗೆ ಪುನರ್ ನೇಮಕ ಮಾಡಲಾಗಿರುತ್ತದೆ. ಸದರಿ ನೌಕರರನ್ನು ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ದಿನಾಂಕ:9–8–2006 ರ ನಡೆವಳಿಯಲ್ಲಿ ಮಂಜೂರಾತಿಯನ್ನು ನೀಡಲಾಗಿರುತ್ತದೆ.

ಸದರಿ ಪ್ರಕರಣ ಕುರಿತು, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 14 (ಎ) ರನ್ವಯ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ಪ್ರಕರಣವನ್ನು ದಿನಾಂಕ:10–2–2010 ರ ಆದೇಶದಲ್ಲಿ ಉಪ ಲೋಕಾಯುಕ್ತರವರಿಗೆ ವಹಿಸಿರುತ್ತದೆ.

ಸದರಿ ಟ್ರ್ಯಾಪ್ ಪ್ರಕರಣ ಕುರಿತು ಜಿಲ್ಲಾ ಮತ್ತು ಪ್ರಧಾನ ಸತ್ರ ನ್ಯಾಯಾಲಯ, ಉಡುಪಿಯಲ್ಲಿ ವಿಚಾರಣೆ ನಡೆಯುತ್ತಿದ್ದು, ಸ್ಪೆಷಲ್ ಕೇಸ್ ನಂ. 25/2006 ದಿನಾಂಕ:7–5–2010 ರ ತೀರ್ಪಿನಲ್ಲಿ, ನೌಕರರ ವಿರುದ್ಧದ ಆರೋಪವು ಸಾಬೀತಾಗಿ ಕಲಂ 7 ಹಾಗೂ ಕಲಂ 13 (1)(ಡಿ) ಸಹವಾಚನ 13 (2) ಲಂಚ ನಿರೋಧಕ ಕಾಯಿದೆ 1988 ರಡಿಯಲ್ಲಿ ಎಸಗಿರುವ ಅಪರಾಧಕ್ಕೆ 1 ವರ್ಷ ಸಾದಾ ಶಿಕ್ಷೆ ಮತ್ತು ರೂ.2000–00 ಗಳ ದಂಡನೆ ವಿಧಿಸಿರುವ ಕಾರಣ, ಸದರಿ ನೌಕರರನ್ನು ಸೇವೆಯಿಂದ ವಜಾಗೊಳಿಸುವ ಬಗ್ಗೆ ಸೂಕ್ತ ಕ್ರಮ ಜರುಗಿಸಲು ಕರ್ನಾಟಕ ಲೋಕಾಯುಕ್ತರವರು ಕೋರಿರುತ್ತಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ.9.ಸೇಇವಿ. 95 ಬೆಂಗಳೂರು ದಿನಾಂಕ:26–6–1996 ಮತ್ತು ಸರ್ವೋಚ್ಛ ನ್ಯಾಯಾಲಯದ ಪ್ರಕರಣ ಸಂಖ್ಯೆ:770/2001 (ಎಸ್.ಎಲ್.ಪಿ ಅಪರಾಧ ಸಂಖ್ಯೆ: 2202/2001) ದಿನಾಂಕ 2–8–2001 ರನ್ವಯ ನ್ಯಾಯಾಲಯವು ನೌಕರರಿಗೆ ಶಿಕ್ಷೆ ವಿಧಿಸಿ ತೀರ್ಪು ನೀಡಿದ್ದಲ್ಲಿ, ಸಂವಿಧಾನದ ಅನುಚ್ಛೇದ 311 (2) ರಡಿಯಲ್ಲಿನ 2ನೇ ಪರಂತುಕದ ಸಮರ್ಥನೆ ಪಡೆದಿರುವ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 14 (1) ರನ್ವಯ, ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾದಂತಹ ಸರ್ಕಾರಿ ನೌಕರರನ್ನು ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಬಹುದಾಗಿದೆ. ಎಂದೂ, ಒಂದು ವೇಳೆ ಮೇಲ್ಮನವಿಯಲ್ಲಿ ಅಪಾದಿತರು ಖುಲಾಸೆಯಾದಲ್ಲಿ, ಅವರನ್ನು ಸೇವೆಯಲ್ಲಿ ಪುನರ್‌ನೇಮಕಗೊಳಿಸಿ, ವಜಾಗೊಳಿಸದಿದ್ದಲ್ಲಿ, ಲಭ್ಯವಾಗುತ್ತಿದ್ದ ಎಲ್ಲಾ ಸೇವಾ ಭತ್ಯೆಗಳಿಗೆ ಅರ್ಹರಾಗಿರುತ್ತಾರೆಂಬ ಸರ್ಕಾರದ ಸುತ್ತೋಲೆಯನ್ನು ಪರಿಗಣಿಸಿ, ಸದರಿ ನೌಕರರನ್ನು ಸೇವೆಯಿಂದ ವಜಾ ಮಾಡುವುದು ಸೂಕ್ತವೆಂದು ಅಭಿಪ್ರಾಯಪಟ್ಟು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಜಿ. ಕಲ್ಪನಾ, ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ಆದ ನಾನು ಜಿಲ್ಲಾ ಮತ್ತು ಪ್ರಧಾನ ಸತ್ರ ನ್ಯಾಯಾಲಯ, ಉಡುಪಿ ಇವರ ತೀರ್ಪು ಸ್ಪೆಷಲ್ ಕೇಸ್. ನಂ.25/2006 ದಿನಾಂಕ:7–5–2010 ಹಾಗೂ ಸರ್ಕಾರದ ಸುತ್ತೋಲೆ ಸಂಖ್ಯೆ:ಸಿಆಸುಇ.9.ಸೇಇವಿ 95 ಬೆಂಗಳೂರು ದಿನಾಂಕ:26–6–1996 ರನ್ವಯ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957 ರ ನಿಯಮ 9 (3) ರೊಂದಿಗೆ ಓದಿಕೊಂಡ ನಿಯಮ 8 (viii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಂ.ಎಸ್. ಧನಂಜಯ, ತಪಾಸಕರು, ಭೂದಾಖಲೆಗಳ ಸಹಾಯಕ ನಿರ್ದೇಶಕರ ಕಛೇರಿ, ಮರುಭೂಮಾಪನ ಬೆಳಗಾಂ ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ, ಸರ್ಕಾರಿ ಸೇವೆಯಿಂದ ವಜಾಗೊಳಿಸಿದೆ.

ಆಯುಕ್ತರು,
ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳು, ಬೆಂಗಳೂರು

ಪಿಆರ್–1469

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ:ಗಭೂಇ:ಗಗುಶಾ:659 AML 2009/10–11/4453, ದಿನಾಂಕ: 6ನೇ ಅಕ್ಟೋಬರ್ 2010**

**ವಿಷಯ :** ಮೆ॥ ಎಸ್.ಆರ್.ಮೈನ್ಸ್ & ಮಿನರಲ್ಸ್ ರವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB Range ಗ್ರಾಮದಲ್ಲಿ 423.00 ಎಕರೆ ಪ್ರದೇಶದಲ್ಲಿ ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ಖನಿಜಕ್ಕಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ

**ಉಲ್ಲೇಖ:** 1. ಈ ಕಛೇರಿ ಸೂಚನೆ ಪತ್ರ ಸಂಖ್ಯೆ:ಗಭೂಇ:ಗಗುಶಾ:659 AML 09, ದಿನಾಂಕ:03–11–2009.

2. ಅರ್ಜಿದಾರರ ಪತ್ರ ದಿನಾಂಕ:21–05–2010.

ಮೇಲಿನ ವಿಷಯಕ್ಕೆ ಸಂಬಂಧಪಟ್ಟಂತೆ, ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, NEB Range ಗ್ರಾಮದಲ್ಲಿ ಮ್ಯಾಂಗನೀಸ್ ಮತ್ತು ಕಬ್ಬಿಣದ ಅದಿರು ಖನಿಜಕ್ಕಾಗಿ ಗಣಿ ಗುತ್ತಿಗೆ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 659 AML 09ನ್ನು ಪರಿಶೀಲಿಸಲಾಯಿತು.

ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು ಅತಿವ್ಯಾಪ್ತಿಯಾಗುತ್ತಿರುವ ಬಗ್ಗೆ ಉಲ್ಲೇಖ(1)ರ ಈ ಕಛೇರಿ ಸೂಚನಾ ಪತ್ರದಲ್ಲಿ ತಿಳಿಸಿ, 30 ದಿನಗಳೊಳಗಾಗಿ ವಿವರಣೆಯನ್ನು ನೀಡುವಂತೆ ಸೂಚಿಸಲಾಗಿತ್ತು. ಉಲ್ಲೇಖ(2)ರಲ್ಲಿ ಅರ್ಜಿದಾರರು ನೀಡಿರುವ ವಿವರಣೆಯಲ್ಲಿ, ಸದರಿ ಪ್ರದೇಶವು ವಿಸ್ತಾರವಾದ ಪ್ರದೇಶವಾಗಿದ್ದು, ಮೆ॥ ಚೌಗುಲೆ & ಕಂಪನಿಯವರ ಅದ್ಯರ್ಪಿತ ಪ್ರದೇಶವನ್ನು ಹೊರತುಪಡಿಸಿದ ಮುಕ್ತ ಪ್ರದೇಶಕ್ಕೆ ತಮ್ಮ ಅರ್ಜಿಯನ್ನು ಪರಿಗಣಿಸಿ, ಮಂಜೂರಾತಿ ನೀಡಿ, ಗಣಿಗಾರಿಕೆ ಮಾಡಲು ಅವಕಾಶ ಮಾಡಿಕೊಡುವಂತೆ ಕೋರಿರುತ್ತಾರೆ. ಮುಂದುವರೆದು, ಖನಿಜ ಮೌಲ್ಯವರ್ಧನೆಗೆ ಪ್ರಸ್ತಾವನೆ ತಯಾರಿಸುತ್ತಿದ್ದು, ಶೀಘ್ರದಲ್ಲೇ ಉದ್ಯೋಗ ಮಿತ್ರದಿಂದ ಅನುಮೋದನೆ ಸಲ್ಲಿಸುವುದಾಗಿ ವಿವರಿಸಿದ್ದಾರೆ. ಆದರೆ, ಮತ್ತೊಮ್ಮೆ ಪರಿಶೀಲಿಸಿ, ಅಪೇಕ್ಷಿತ ಪ್ರದೇಶದ ಅತಿವ್ಯಾಪ್ತಿಯ ಬಗ್ಗೆ ಖಚಿತಪಡಿಸಿಕೊಂಡಿದ್ದು, ಸ್ಥಳದ ಲಭ್ಯತೆ ಇಲ್ಲದೇ ಇರುವ ಹಿನ್ನೆಲೆಯಲ್ಲಿ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶದ ಸಂಖ್ಯೆ:ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 659 ಎಎಂಎಲ್ 09ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ಪಿಆರ್–1481 **ನಿರ್ದೇಶಕರು**

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ಸಂಖ್ಯೆ:ಗಭೂಇ:ಗಗುಶಾ:52 ಎಪಿಎಲ್ 05/10–11/4451, ದಿನಾಂಕ: 6ನೇ ಅಕ್ಟೋಬರ್ 2010**

**ವಿಷಯ :** ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಮುರಾರಿಪುರ ಗ್ರಾಮದ 80.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಅದಿರು ಖನಿಜಗಳಿಗಾಗಿ ಸಲ್ಲಿಸಿರುವ ಅನ್ವೇಷಣಾ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:DMG:52 APL 05/1154-55, ದಿನಾಂಕ:24–04–2010.

2. ಈ ಕಛೇರಿ ಸೂಚನ ಪತ್ರ ಸಂಖ್ಯೆ:ಗಭೂಇ:ಗಗುಶಾ: 52 APL 05/6956, ದಿನಾಂಕ:4–08–2010

2. ಅರ್ಜಿದಾರರ ಪತ್ರ ದಿನಾಂಕ:4–08–2010.

**ಪ್ರಸ್ತಾವನೆ:**

ಶ್ರೀ ಎನ್.ಗಿರಿಯಪ್ಪ ಇವರು ಬಳ್ಳಾರಿ ಜಿಲ್ಲೆ, ಸಂಡೂರು ತಾಲ್ಲೂಕು, ಮುರಾರಿಪುರ ಗ್ರಾಮದ 80.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಅದಿರು ಖನಿಜಗಳಿಗಾಗಿ ಅನ್ವೇಷಣಾ ಲೈಸೆನ್ಸ್ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ:52 ಎಪಿಎಲ್ 05ನ್ನು ಪರಿಶೀಲಿಸಿದೆ.

ಅರ್ಜಿದಾರರಿಗೆ ಉಲ್ಲೇಖ (1)ರ ಈ ಕಛೇರಿ ಪತ್ರದಲ್ಲಿ ಸರಿಯಾದ ನಕ್ಷೆಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ತದನಂತರ ಉಲ್ಲೇಖ(2)ರಲ್ಲಿ ನಿಯಮ 12(1)ರನ್ವಯ ಸೂಚನೆ ಜಾರಿ ಮಾಡಿ, ಅಪೇಕ್ಷಿತ ಪ್ರದೇಶವು ಅಧಿಸೂಚಿತ ಪ್ರದೇಶದೊಳಗಡೆ ಬರುವ ಕಾರಣ 30 ದಿನಗಳೊಳಗಾಗಿ ಉತ್ತರಿಸದಿದ್ದಲ್ಲಿ ಅರ್ಜಿಯನ್ನು ತಿರಸ್ಕರಿಸಲಾಗುವುದೆಂದು ತಿಳಿಸಲಾಗಿತ್ತು. ಅರ್ಜಿದಾರರು ಉಲ್ಲೇಖ(3)ರ ತಮ್ಮ ಪತ್ರದಲ್ಲಿ ಈ ಕಛೇರಿಯ ಸೂಚನಾ ಪತ್ರಕ್ಕೆ ಉತ್ತರಿಸಿ, ಅಧಿಸೂಚಿತ ಪ್ರದೇಶದೊಳಗಡೆ ಸದರಿ ಪ್ರದೇಶವು ಬರುವುದಿಲ್ಲವೆಂಬುದನ್ನು ಸಾಧಿಸಿ ತೋರಿಸಲು 30 ದಿನಗಳ ಕಾಲಾವಕಾಶವನ್ನು ಕೋರಿದ್ದರು. ಆದರೆ, 30 ದಿನಗಳ ಕಾಲಾವಕಾಶದ ಅವಧಿಯು ಮುಗಿದರೂ ಅರ್ಜಿದಾರರಿಂದ ಯಾವುದೇ ಪತ್ರ ಬಂದಿರುವುದಿಲ್ಲ. ಆದುದರಿಂದ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶದ ಸಂಖ್ಯೆ:ಸಿಐ 03 ಎಂಎಂಎಂ 95 ದಿನಾಂಕ:27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ:09–02–2007ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಖನಿಜಾನ್ವೇಷಣಾ ಅರ್ಜಿ ಸಂಖ್ಯೆ 52 ಎಪಿಎಲ್ 05ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

ಪಿಆರ್–1482 **ನಿರ್ದೇಶಕರು**

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಕೋಲಾರ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್.ಸಿ–10–2010**

| **ಅರ್ಜಿದಾರರು:** | | **ಪ್ರತಿವಾದಿಗಳು:** |
|---|---|---|
| 1) Smt Sheela @ shilpa K. W/o Late. A. Manjunath | V/s | 1) Mr. B. Goushe Mohamed Khan s/o B. Ahmed Ali Khan R/o #64/14, Trunk Road Rayachoti (VM) Kadapa District AP |
| 2) Master Vinayakumar, S/o. Late A. Manjunath | | 2) M/s. Shriram General Insurance Co Ltd., Branch Office #S/5 Munerish Chambers Infantry Road, Bangalore |
| 3) Baby Vijayalakshmi D/o Late A. Manjunath All R/o Royalpad village Srinivasapur Taluk, Kolar District-563101 | | |

## ಅಧಿಸೂಚನೆ

ಅರ್ಜಿದಾರರಾದ Smt. Sheela @ Shilpa K ಅವರು ತಮ್ಮ ಗಂಡ Late A. Manjunath ಅವರು 1ನೇ ಪ್ರತಿವಾದಿ Mr. B. Goushe Mohmeed Khan ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:15–09–2009 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ:ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ:30–09–2010ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು
ಕೋಲಾರ ಉಪ ವಿಭಾಗ, ಕೋಲಾರ.

ಪಿಆರ್–1478

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಾರ್ಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18

**ಸಂಖ್ಯೆ: ಜೆಆರ್‌ಬಿ/ಸಮಾಪನೆ/152/2010–11, ದಿನಾಂಕ:28ನೇ ಸೆಪ್ಟೆಂಬರ್, 2010**

**ವಿಷಯ:** ಮದ್ರಾಸ್ ಇಂಜಿನಿಯರಿಂಗ್ ಗ್ರೂಪ್ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಇದನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಉಪ ನಿಬಂಧಕರು–2, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂ:ಡಿಆರ್‌ಬಿ–2/ಸಮಾಪನೆ/61/98–99, ದಿನಾಂಕ:27–10–2006 ಮತ್ತು 07–08–2010.

**ಪ್ರಸ್ತಾವನೆ:**

ಮದ್ರಾಸ್ ಇಂಜಿನಿಯರಿಂಗ್ ಗ್ರೂಪ್ ನೌಕರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ದಕ್ಷಿಣ ತಾಲ್ಲೂಕು, ಈ ಸಂಘವು ನೋಂದಣಿಯಾದ ನಂತರ ಯಾವುದೇ ಕಾರ್ಯಚಟುವಟಿಕೆ ನಡೆಸದೆ ಹಲವಾರು ವರ್ಷಗಳಿಂದ ನಿಷ್ಕ್ರಿಯವಾಗಿರುತ್ತದೆ. ಹಾಗೂ ಈ ಸಂಘದ ಲೆಕ್ಕ ತಪಾಸಣೆಯಾಗಿರುವುದಿಲ್ಲ. ಸಂಘವು ಅನೇಕ ವರ್ಷಗಳಿಂದ ಇಲಾಖೆಯೊಂದಿಗೆ ಯಾವುದೇ ಸಂಪರ್ಕ ಹೊಂದಿರುವುದಿಲ್ಲ ಹಾಗೂ ಇದರ ಅಸ್ತಿತ್ವದ ಬಗ್ಗೆ ಸರಿಯಾದ ಮಾಹಿತಿ ಇರುವುದಿಲ್ಲ. ಈ ಸಂಘವನ್ನು ಪುನ:ಶ್ಚೇತನಗೊಳಿಸಲು ಸಂಘದ ಆಡಳಿತ ಮಂಡಳಿಯವರಾಗಲೀ ಅಥವಾ ಸದಸ್ಯರಾಗಲೀ ಮುಂದೆ ಬರುತ್ತಿಲ್ಲ. ಇಂತಹ ಸಂಘವನ್ನು ಮುಂದುವರೆಸುವುದರಿಂದ ಇದರ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲೀ ಉಪಯೋಗವಿರುವುದಿಲ್ಲ.

ಈ ಸಂಘದ ಬಗ್ಗೆ ಕನ್ನಡಪ್ರಭ ದಿನಪತ್ರಿಕೆಯ ದಿನಾಂಕ:21–02–2004ರಲ್ಲಿ ಪ್ರಕಟಣೆ ಹೊರಡಿಸಿದ್ದು, ಈ ಸಂಘದ ಬಗ್ಗೆ ಯಾರೂ ಆಸಕ್ತಿ ವಹಿಸಿರುವುದಿಲ್ಲ.

ಆದುದರಿಂದ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಉಲ್ಲೇಖದ ಪತ್ರಗಳಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು–2, ಬೆಂಗಳೂರು ನಗರ ಜಿಲ್ಲೆ, ಇವರು ತಿಳಿಸಿರುತ್ತಾರೆ.

ಮೇಲಿನ ಕಾರಣಗಳಿಂದ ಹಾಗೂ ಉಪ ನಿಬಂಧಕರ ವರದಿಯ ಮೇರೆಗೆ ಸದರಿ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

### "ಆದೇಶ"

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್‌ಎಂ/2008, ದಿನಾಂಕ:27–05–2010ರಲ್ಲಿ ದತ್ತವಾಗಿರುವ ಅಧಿಕಾರದನ್ವಯ ಸಿ.ಎಸ್. ವೀರೇಶ್, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಮದ್ರಾಸ್ ಇಂಜಿನಿಯರಿಂಗ್ ಗ್ರೂಪ್ ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು, ಈ ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿಯಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ, ಬೆಂಗಳೂರು ಪೂರ್ವ ತಾಲ್ಲೂಕು ಇವರನ್ನು ಸಂಘದ ಸಮಾಪನಾಧಿಕಾರಿಯಾಗಿ ನೇಮಕ ಮಾಡಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಗಳು ಸಂಘದ ಪ್ರಭಾರವನ್ನು ವಹಿಸಿಕೊಂಡು ಸಂಘದ ಲೆಕ್ಕಪುಸ್ತಕಗಳನ್ನು ಹಾಗೂ ಸಮಸ್ತ ದಾಖಲಾತಿಗಳನ್ನು ಹಾಗೂ ಸಂಘದ ಎಲ್ಲಾ ಆಸ್ತಿ–ಜವಾಬ್ದಾರಿಗಳನ್ನು ಜರೂರಾಗಿ ವಿಲೇವಾರಿ ಮಾಡಿ, ಸದರಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:28–09–2010ರಂದು ಹೊರಡಿಸಿರುತ್ತೇನೆ.

**ಸಿ.ಎಸ್. ವೀರೇಶ್,**
ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು.
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿಆರ್–1477

## ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಹರಪನಹಳ್ಳಿ.

## ಉಪವಿಭಾಗ, ಹರಪನಹಳ್ಳಿ, ಇವರ ಸೆಪ್ಟೆಂಬರ್ – 2010ರ ಮಾಹೆಯ ತಾತ್ಕಾಲಿಕ ಪ್ರವಾಸ ಪಟ್ಟಿ

| ದಿನಾಂಕ | ಇಂದ | ವರೆಗೆ | ಕೈಗೊಳ್ಳಲಿರುವ ಕೆಲಸ ಕಾರ್ಯಗಳು |
|---|---|---|---|
| 01/09/2010 | ಹರಪನಹಳ್ಳಿ<br>ದಾವಣಗೆರೆ | ದಾವಣಗೆರೆ<br>ಹರಪನಹಳ್ಳಿ | ಹಣ ದುರುಪಯೋಗ ಸಭೆಯಲ್ಲಿ ಭಾಗವಹಿಸುವುದು ಕೇಂದ್ರ ಸ್ಥಾನಕ್ಕೆ ಹಿಂಪಯಣ. |
| 02/09/2010 | ಹರಪನಹಳ್ಳಿ | ಕೇಂದ್ರಸ್ಥಾನ | ಕಛೇರಿ ಕೆಲಸ ನಿರ್ವಹಿಸುವುದು. |
| 03/09/2010 | ಹರಪನಹಳ್ಳಿ | ಜಗಳೂರು | ಕಾರ್ಯದರ್ಶಿಗಳ ಮಾಸಿಕ ಸಭೆಯಲ್ಲಿ ಭಾಗವಹಿಸುವುದು ಹಾಗೂ ತಂಗುವುದು. |
| 04/09/2010 | ಜಗಳೂರು | ದಾವಣಗೆರೆ | ಮಾನ್ಯ ಉಪ ನಿಬಂಧಕರ ಕಛೇರಿಯಲ್ಲಿ ಜರುಗುವ ಮಾಸಿಕ ಸಭೆಯಲ್ಲಿ ಹಾಜರಾಗುವುದು. |
| 05/09/2010 | ಕೇಂದ್ರಸ್ಥಾನ | – | ಭಾನುವಾರ ರಜೆ ಉಪಯೋಗ. |
| 06/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ನಿರ್ವಹಿಸುವುದು ಹಾಗೂ ದಾವೆ ಪ್ರಕರಣಗಳ ವಿಚಾರಣೆ ನಡೆಸುವುದು. |
| 07/09/2010 | ಹರಪನಹಳ್ಳಿ | ರಾಗಿಮಸಲವಾಡ<br>ಹರಪನಹಳ್ಳಿ | ರಾಗಿಮಸಲವಾಡ ಪ್ರಾ.ಕೃ.ಪ.ಸ.ಸ.ಸಂ.ನಿ., ಇದರ ಪರಿವೀಕ್ಷಣೆ ನಡೆಸುವುದು, ಕೇಂದ್ರ ಸ್ಥಾನಕ್ಕೆ ಹಿಂಪಯಣ. |
| 08/09/2010 | ಹರಪನಹಳ್ಳಿ | ನಿಚ್ಚವ್ವನ ಹಳ್ಳಿ<br>ಹರಪನಹಳ್ಳಿ | ನಿಚ್ಚವ್ವನಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇದಕ್ಕೆ ಭೇಟಿ ನೀಡಿ ಬಿ.ಡಿ.ಪಿ ಬಗ್ಗೆ ಪರಿಶೀಲಿಸುವುದು ಹಾಗೂ ಕೇಂದ್ರ ಸ್ಥಾನಕ್ಕೆ ಹಿಂಪಯಣ. |
| 09/09/2010 | ಹರಪನಹಳ್ಳಿ | ಜಗಳೂರು<br>ಹರಪನಹಳ್ಳಿ | ಕ್ಯಾಸೇನಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇದಕ್ಕೆ ಭೇಟಿ ನೀಡಿ ಬಿ.ಡಿ.ಪಿ. ಸಾಲದ ಬಗ್ಗೆ ಪರಿಶೀಲಿಸುವುದು ಹಾಗೂ ಕೇಂದ್ರ ಸ್ಥಾನಕ್ಕೆ ಹಿಂಪಯಣ. |
| 10/09/2010 | ಕೇಂದ್ರಸ್ಥಾನ | – | ರಂಜಾನ ಹಬ್ಬದ ಪ್ರಯುಕ್ತ ರಜೆ ಉಪಯೋಗಿಸುವುದು. |
| 11/09/2010 | ಕೇಂದ್ರಸ್ಥಾನ | – | 2ನೇ ಶನಿವಾರ ರಜೆ ಉಪಯೋಗಿಸುವುದು |
| 12/09/2010 | ಕೇಂದ್ರಸ್ಥಾನ | – | ಭಾನುವಾರ ರಜೆ ಉಪಯೋಗಿಸುವುದು |
| 13/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ನಿರ್ವಹಿಸುವುದು ಹಾಗೂ ದಾವ ಪ್ರಕರಣಗಳ ವಿಚಾರಣೆ ನಡೆಸುವುದು |
| 14/09/2010 | ಹರಪನಹಳ್ಳಿ | ಹರಪನಹಳ್ಳಿ | ಹರಪನಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇದರ ಪರಿವೀಕ್ಷಣೆ ನಡೆಸುವುದು |
| 15/09/2010 | ಹರಪನಹಳ್ಳಿ | ಮತ್ತಿಹಳ್ಳಿ<br>ಹರಪನಹಳ್ಳಿ | ಮತ್ತಿಹಳ್ಳಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇದಕ್ಕೆ ಭೇಟಿ ನೀಡಿ ಬಿ.ಡಿ.ಪಿ ಸಾಲದ ಬಗ್ಗೆ ಪರಿಶೀಲಿಸುವುದು, ಕೇಂದ್ರ ಸ್ಥಾನಕ್ಕೆ ಹಿಂಪಯಣ |
| 16/09/2010 | ಹರಪನಹಳ್ಳಿ | ಉಚ್ಚಂಗಿದುರ್ಗ<br>ಹರಪನಹಳ್ಳಿ | ಉಚ್ಚಂಗಿದುರ್ಗ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಇದಕ್ಕೆ ಭೇಟಿ ನೀಡಿ ಬಿ.ಡಿ.ಪಿ. ಸಾಲದ ಬಗ್ಗೆ ಪರಿಶೀಲಿಸುವುದು ಹಾಗೂ ಕೇಂದ್ರ ಸ್ಥಾನಕ್ಕೆ ಹಿಂಪಯಣ |
| 17/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ನಿರ್ವಹಿಸುವುದು |
| 18/09/2010 | ಹರಪನಹಳ್ಳಿ | ಜಗಳೂರು | ಜಗಳೂರು ತಾಲ್ಲೂಕಿನ ಆಯ್ದ ಸಹಕಾರ ಸಂಘಗಳಿಗೆ ಭೇಟಿ ನೀಡಿ ಬಿ.ಡಿ.ಪಿ. ಸಾಲದ ಬಗ್ಗೆ ಪರಿಶೀಲಿಸುವುದು ಹಾಗೂ ಜಗಳೂರಿಗೆ ಬಂದು ತಂಗುವುದು |
| 19/09/2010 | ಜಗಳೂರು | ಹರಪನಹಳ್ಳಿ | ಕೇಂದ್ರ ಸ್ಥಾನಕ್ಕೆ ಹಿಂಪಯಣ ಹಾಗೂ ಭಾನುವಾರ ರಜೆ ಉಪಯೋಗ |
| 20/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ಹಾಗೂ ದಾವೆ ಪ್ರಕರಣಗಳ ವಿಚಾರಣೆ ನಡೆಸುವುದು |
| 21/09/2010 | ಹರಪನಹಳ್ಳಿ | ಗುತ್ತಿದುರ್ಗ<br>ಹರಪನಹಳ್ಳಿ | ಗುತ್ತಿದುರ್ಗ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಪರಿವೀಕ್ಷಣೆ ನಡೆಸುವುದು, ಕೇಂದ್ರ ಸ್ಥಾನಕ್ಕೆ ಹಿಂಪಯಣ |
| 22/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ನಿರ್ವಹಿಸುವುದು |
| 23/09/2010 | ಹರಪನಹಳ್ಳಿ | ಹೊಸಕೋಟೆ<br>ಹರಪನಹಳ್ಳಿ | ಹೊಸಕೋಟೆ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಭೇಟಿ ನೀಡಿ ಬಿ.ಡಿ.ಪಿ. ಸಾಲದ ಬಗ್ಗೆ ಪರಿಶೀಲಿಸುವುದು ಹಾಗೂ ಕೇಂದ್ರ ಸ್ಥಾನಕ್ಕೆ ಹಿಂಪಯಣ |
| 24/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ನಿರ್ವಹಿಸುವುದು |
| 25/09/2010 | ಕೇಂದ್ರಸ್ಥಾನ | – | ದಾವ ಪ್ರಕರಣಗಳ ವಿಚಾರಣೆ ನಡೆಸುವುದು. |
| 26/09/2010 | ಕೇಂದ್ರಸ್ಥಾನ | – | ಭಾನುವಾರ ರಜೆ ಉಪಯೋಗ |
| 27/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ನಿರ್ವಹಿಸುವುದು |
| 28/09/2010 | ಹರಪನಹಳ್ಳಿ | ಅಣಜಿಗೆರೆ<br>ಹರಪನಹಳ್ಳಿ | ಅಣಜಿಗರೆ ವಹಿಳಾ ವಿವಿದ್ದೋದ್ದೇಶ ಕೈಗಾರಿಕೆ ಸಹಕಾರ ಸಂಘ ಇದರ ಪರಿವೀಕ್ಷಣೆ ನಡೆಸುವುದು ಹಾಗೂ ಕೇಂದ್ರ ಸ್ಥಾನಕ್ಕೆ ಹಿಪಯಣ |
| 29/09/2010 | ಕೇಂದ್ರಸ್ಥಾನ | – | ಕಛೇರಿ ಕೆಲಸ ನಿರ್ವಹಿಸುವುದು |
| 30/09/2010 | ಕೇಂದ್ರಸ್ಥಾನ | – | ಕ್ಷೇತ್ರ ಸಿಬ್ಬಂದಿಯವರ ಸಭೆ ನಡೆಸುವುದು. |

**ಸಂಖ್ಯೆ:ಸ.ನಿ.ಹೆಚ್.ಆರ್.ಪಿ/ಸಿಬ್ಬಂದಿ/ತಾ.ಪ್ರಪ/2010–11/302, ದಿನಾಂಕ:6ನೇ ಸೆಪ್ಟೆಂಬರ್ 2010**

**2010ನೆ ಸೆಪ್ಟೆಂಬರ್ ಮಾಹೆಯ ಪರಿವೀಕ್ಷಣೆ ನಡೆಸಲಿರುವ ಸಹಕಾರ ಸಂಘಗಳ ವಿವರ**

| | |
|---|---|
| 1) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ರಾಗಿಮಸಲವಾಡ, ದಿನಾಂಕ:7–9–2010 :– | **ಟಿ. ಚೆನ್ನಬಸಪ್ಪ** ಹಿರಿಯ ನಿರೀಕ್ಷಕರು |
| 2) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಹರಪನಹಳ್ಳಿ, ದಿನಾಂಕ:14–0–2010 :– | **ಪತ್ರೇಗೌಡ** ದ್ವಿ.ದ.ಸ. |
| 3) ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘ, ಗುತ್ತಿದುರ್ಗ, ದಿನಾಂಕ:21–9–2010 :– | **ಸುರೇಂದ್ರ** ಸ.ಸಂ.ನಿರೀಕ್ಷಕರು, ಜಗಳೂರು ತಾಲ್ಲೂಕು |
| 4) ಮಹಿಳಾ ವಿವಿದ್ದೋದ್ದೇಶ ಕೈಗಾರಿಕೆ ಸಹಕಾರ ಸಂಘ, ಅಣಜಿಗೆರೆ ದಿನಾಂಕ:28–9–2010 :– | **ಸಿ.ಡಿ.ಓ.,** ಹರಪನಹಳ್ಳಿ |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಹರಪನಹಳ್ಳಿ ಉಪವಿಭಾಗ, ಹರಪನಹಳ್ಳಿ.

ಪಿಆರ್–1417

**PROCEEDINGS OF THE DIRECTOR, DEPARTMENT OF MINES AND GEOLOGY, BANGALORE**

**No.DMG:121 AML 2001:RML-2147/9259, dated 21st September 2010**

**Sub :** Consideration of renewal of mining lease application for Moulding Sand, filed by Sri Jyothi Mrthunjaya, Legal Heir Smt Jyothi Manjula, in Galaganatha village, Haveri taluk and District, over an area of 35-00 Hectares-reg

**Read** : 1) Renewal application No.121 AML 2001 dated:22-06-2001.
2) This Office Notice No.DMG:121 AML 2001:RML-2147:458-60 dated13-04-2010.

**PREAMBLE:**

Sri Jyothi Mruthunjaya (Legal Heir Smt Jyothi Manjula) filed an application as per Rule 24 A(1) of MC Rules 1960, for renewal of mining lease No.2147, held by him for a period of (10) ten years wef., 17-07-1992, for Moulding Sand in Galaganatha village, Haveri taluk and District, over an area of 35-00 Hectares.

Revenue reports were called from the Deputy Commissioner, Haveri District, The Deputy Commissioner in his letter No. LNDCR 10/2002-03 dt.31-05-2002 has send his recommendations for not to sanction mining lease in the said area, since there is lot of objections from Galaganatha public, and if mining lease is renewed in the said area, it will hurts the peace of public.

The Senior Geologist, Haveri District has furnished his technical report along with Sand Sample analysis report of the area in question and stated, that as per 14 IS 3343:1965 of Indian Standard specification for natural moulding sand which contain variable amount of Clay is clarified according to clay percentage and progressive recovery. The natural moulding sand shall be the three main grades A, B & C according to Clay percentage. Which is shown as below:

| Grades | A | B | C |
|---|---|---|---|
| Percentage of Clay | 5-10 | 10-15 | 15-20 |

Recovery Percentage > 60%

Sand Sample analysis report

| Sand Sample No. | Name of ML Holder | $SiO_2$% | Recovery % | % of Clay | Classification |
|---|---|---|---|---|---|
| Sa No.13 | Smt Jyothi Manjula | 87.75 | 57.34 | 0.75 | Ordinary Sand |

**Field Observation:**

As per Geologist field observation, the area situated between Galaganatha and Holalu villages. The River is flowing from South to North direction. The width of the River is 150 meters. The area is composed of coarse to medium sand grains. The sand is deposited at centre of the river banks, water is flowing at the north of the valley at the time of inspection. The sample is collected from 2 to 6 places by Cone and Quarter method. Pebbles are deposited at the banks of lease area. As per Analysis report the Clay % is 0.75 but for Moulding sand mandatory requirement of Clay is 5-20%. Hence the sample is classified as Ordinary Sand.

As per Government Order No.FEE 25 ENG 2008 dtd.04-02-2009 (Unique No.35), In Case of ongoing mining lease has been issued, the Director of Mines and Geology Department shall inform this mandatory provisions to all the mining lease holders and ensure that Environment Protection Fee for the lease area at the rate of Rs. 84,000/Hectare is remitted within 3 months from the date of this order. In the present instance the Lessee has filed renewal application for 35 Hectares, EPF amount works out to Rs.29,40,000/-. Where as the lessee has remitted only Rs.1,00,000/- towards EPF and balance of Rs.28,40,000/- has not paid till date.

Further the renewal applicant has not furnished MOEF Clearance till date, which is a mandatory for renewal of lease and should have furnished the same along with the renewal application or before expiry of lease period.

In view of all the facts and circumstances above the Lessee/applicant's renewal application for Moulding sand cannot be considered for grant, hence a Notice under Rule 26(1) of MCR 1960 was issued vide reference (2) above, but the applicant failed to reply for the same. Hence the following order:

**ORDER**

I, Sri M.E. Shivalinga Murthy IAS, the Director of Mines and Geology, Bangalore, in exercise of powers delegated under Government Notification No. CI 3 MMN 95 dated:27-05-1995 & Notification No. CI 214 MMM 2006 dated:9-02-2007 do hereby reject the application for grant of mining lease vide No. 121 AML 2001(RML 2147) filed by Sri Jyothi Mrthyunjaya, Legal heir Smt Jyothi Manjula the reasons stated above under rule 26(1) of mineral concession rules 1960.

PR No.1412 **DIRECTOR**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ನ್ಯಾಯಾಲಯ ಶಿವಮೊಗ್ಗ ಉಪ ವಿಭಾಗ ಶಿವಮೊಗ್ಗ**

**ಅಧಿಭಾರ ಅರ್ಜಿ ಸಂಖ್ಯೆ 14/2005–06**

**ಅರ್ಜಿದಾರರು**

ಕಾರ್ಯದರ್ಶಿ, ಗ್ರಾಮಾಂತರ ಗೃಹನಿರ್ಮಾಣ ಸಹಕಾರ ಸಂಘ ನಿ., ಶಿವಮೊಗ್ಗ

**ಎದುರು ಅರ್ಜಿದಾರರು**

1. ವಿ ನರಸೇಗೌಡ ಬಿನ್ ವೆಂಕಟರಮಣಯ್ಯ, ಗಾಡಿಕೊಪ್ಪ ವಾಸಿ, ಶಿವಮೊಗ್ಗ.
2. ಎಸ್.ಟಿ. ಹಾಲಪ್ಪ ಬಿನ್ ತಿಮ್ಮಪ್ಪ, ಪ್ರಿಯದರ್ಶಿನಿ ಬಡಾವಣೆ, ಶಿವಮೊಗ್ಗ.
3. ಬಸಪ್ಪ ಬಿನ್ ಕೆಂಚಪ್ಪ, ಕಾಶಿಪುರ ವಾಸಿ, ವಿನೋಬನಗರ ಅಂಚೆ, ಶಿವಮೊಗ್ಗ.
4. ಭೀಮಪ್ಪ ಬಿನ್ ಹುರಗುಲಪ್ಪ, ಕಾಶಿಪುರ ವಾಸಿ, ವಿನೋಬನಗರ ಅಂಚೆ, ಶಿವಮೊಗ್ಗ.
5. ಈಶ್ವರಪ್ಪ, ಬಿನ್ ರುದ್ರಪ್ಪ, ಮುದುವಾಲ ವಾಸಿ, ಹಾರನಹಳ್ಳಿ ಅಂಚೆ, ಶಿವಮೊಗ್ಗ.
6. ಸೈಯದ್ ಬುಡೇನ್‌ಸಾಬ್, ಬಿನ್ ಸೈಯದ್ ಫಕ್ರುದ್ದೀನ್ ಸಾಬ್, ಸೋಮಿಕೊಪ್ಪ ಅಂಚೆ ಕೋಟೆಗಂಗೂರು, ಶಿವಮೊಗ್ಗ ತಾಲ್ಲೂಕು
7. ಫಾತೀಮಾ ಬೀ, ಕೋಂ ಅಬ್ದುಲ್ ಸಲಾಂ, ಸೋಮಿನಕೊಪ್ಪ ಅಂಚೆ, ಕೋಟೆಗಂಗೂರು, ಶಿವಮೊಗ್ಗ ತಾಲ್ಲೂಕು
8. ಓ.ಸಿದ್ದಪ್ಪ, ಬಿನ್ ತಿಮ್ಮಪ್ಪ, ಕಲ್ಲಗಂಗೂರು, ಅಬ್ಬಲಗೆರೆ ಅಂಚೆ, ಶಿವಮೊಗ್ಗ ತಾಲ್ಲೂಕು
9. ಎಚ್.ಜಿ. ಹನುಮಂತಪ್ಪ (ಮೃತ)

   ವಾರಸುದಾರರು:

   ಲಕ್ಷ್ಮಮ್ಮ, ಕೋಂ.ದಿ.ಹನುಮಂತಪ್ಪ. ಆಲ್ಕೋಳ ಗ್ರಾಮ, ಗಾಡಿಕೊಪ್ಪ ಅಂಚೆ ಶಿವಮೊಗ್ಗ.
10. ಆಡಿವೆಪ್ಪ ಬಿನ್ ಕಲ್ಲಣ್ಣರ ದುರ್ಗಪ್ಪ, ಹರಮಘಟ್ಟ ಗ್ರಾಮ ಹರಮಘಟ್ಟ ಅಂಚೆ, ಶಿವಮೊಗ್ಗ.
11. ಎ.ಇ. ಚಂದ್ರಶೇಖರ್ (ಮೃತ)

    ವಾರಸುದಾರರು: ಶ್ರೀಮತಿ ಪಂಕಜ, ಕೋಂ. ದಿ. ಎ.ಇ. ಚಂದ್ರಶೇಖರ್, ಕೇರಾಫ್ ಈಶ್ವರಪ್ಪ, ಬಿನ್ ಬಸಪ್ಪ, ರಾಜೇಂದ್ರನಗರ ಬಲಭಾಗ, 3ನೇ ಕ್ರಾಸ್, ಶಿವಮೊಗ್ಗ.
12. ಶ್ರೀಮತಿ ನಾಗರತ್ನಮ್ಮ, ಕೋಂ ಶೇಖರಪ್ಪ, ಪುರದಾಳು ಅಂಚೆ, ಶಿವಮೊಗ್ಗ.
13. ಜಿ.ಎಂ. ವೀರಭದ್ರಪ್ಪ, ಬಿನ್ ಮಂಜಾನಾಯ್ಕ, ಪುರದಾಳು ಅಂಚೆ, ಶಿವಮೊಗ್ಗ.
14. ಶ್ರೀಮತಿ ಜಿ.ಎನ್. ಶೋಭಾ, ಬಿನ್ ನರಸೇಗೌಡ
15. ಶ್ರೀಮತಿ ಜಿ.ಎನ್. ಗೀತಾ ಬಿನ್ ನರಸೇಗೌಡ
16. ಶ್ರೀಮತಿ ಜಿ.ಎನ್. ವನಜಾಕ್ಷಿ ಬಿನ್ ನರಸೇಗೌಡ
17. ಶ್ರೀನಿವಾಸ ಬಿನ್ ನರಸೇಗೌಡ
18. ಶ್ರೀಮತಿ ಗೌರಮ್ಮ, ಕೋಂ ನರಸೇಗೌಡ ಗಾಡಿಕೊಪ್ಪ ವಾಸ, ಶಿವಮೊಗ್ಗ.
19. ಶ್ರೀ ಪ್ರಭಾಕರ್ ಬಿನ್ ರಾಮಣ್ಣಗೌಡ ಸಿ.ಸಿ.ಟಿ.ಬಿ ಲೇಔಟ್, ವಿಕಾಸ ಸ್ಕೂಲ್ ಹತ್ತಿರ ವಿನೋಬನಗರ, ಶಿವಮೊಗ್ಗ.

20. ಹನುಮಂತಮ್ಮ ಕೋಂ ಅವಲಕ್ಕಿ ರಂಗಪ್ಪ ಆಲ್ಕೊಳ, ಗಾಡಿಕೊಪ್ಪ ಅಂಚೆ, ಶಿವಮೊಗ್ಗ ತಾಲ್ಲೂಕು
21. ಶಿವಣ್ಣ ಬಿನ್ ಅವಲಕ್ಕಿ ರಂಗಪ್ಪ ಅಲ್ಕೊಳ, ಗಾಡಿಕೊಪ್ಪ ಅಂಚೆ, ಶಿವಮೊಗ್ಗ ತಾಲ್ಲೂಕು
22. ಮಂಜಪ್ಪ ಬಿನ್ ಅವಲಕ್ಕಿ ರಂಗಪ್ಪ ಅಲ್ಕೊಳ, ಗಾಡಿಕೊಪ್ಪ ಅಂಚೆ, ಶಿವಮೊಗ್ಗ ತಾಲ್ಲೂಕು
23. ಪರಮೇಶ್ ಬಿನ್ ಅವಲಕ್ಕಿ ರಂಗಪ್ಪ ಅಲ್ಕೊಳ, ಗಾಡಿಕೊಪ್ಪ ಅಂಚೆ, ಶಿವಮೊಗ್ಗ ತಾಲ್ಲೂಕು
24. ಶೇಖರ್ ಬಿನ್ ಅವಲಕ್ಕಿ ರಂಗಪ್ಪ ಅಲ್ಕೊಳ, ಗಾಡಿಕೊಪ್ಪ ಅಂಚೆ, ಶಿವಮೊಗ್ಗ ತಾಲ್ಲೂಕು
25. ನಾಗರಾಜಪ್ಪ ಬಿನ್ ಅವಲಕ್ಕಿ ರಂಗಪ್ಪ ಅಲ್ಕೊಳ, ಗಾಡಿಕೊಪ್ಪ ಅಂಚೆ, ಶಿವಮೊಗ್ಗ ತಾಲ್ಲೂಕು
26. ರಾಜಪ್ಪ ಬಿನ್ ಅವಲಕ್ಕಿ ರಂಗಪ್ಪ ಅಲ್ಕೊಳ, ಗಾಡಿಕೊಪ್ಪ ಅಂಚೆ, ಶಿವಮೊಗ್ಗ ತಾಲ್ಲೂಕು
27. ಸಿದ್ದಮ್ಮ ಕೋಂ ಬಸಪ್ಪ ಗಾಡಿಕೊಪ್ಪ ಗ್ರಾಮ, ಶಿವಮೊಗ್ಗ ತಾಲ್ಲೂಕು
28. ಶಿವಲಿಂಗಪ್ಪ ಬಿನ್ ಎಂ. ಬಸಪ್ಪ ಗಾಡಿಕೊಪ್ಪ ಗ್ರಾಮ, ಶಿವಮೊಗ್ಗ ತಾಲ್ಲೂಕು
29. ಕುಮಾರ ಬಿನ್ ಎಂ. ಬಸಪ್ಪ ಗಾಡಿಕೊಪ್ಪ ಗ್ರಾಮ, ಶಿವಮೊಗ್ಗ ತಾಲ್ಲೂಕು

(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತು ಆದೇಶ)

**ಪ್ರಸ್ತಾವನೆ:**

ಅರ್ಜಿದಾರರ ಸಂಘ ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 69 ರಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ 1995–96 ರಿಂದ 2001–02ನೇ ಸಾಲಿನ ಲೆಕ್ಕಪರಿಶೋಧನಾ ವರದಿಯಂತೆ ರೂ.9,47,380–00 ಗಳನ್ನು ಸಾಲಿಯಾನ ಶೇ.18ರ ಬಡ್ಡಿಯೊಂದಿಗೆ ವಸೂಲಾತಿ ಬಗ್ಗೆ ಎದುರಿಗಳ ವಿರುದ್ಧ ಅಧಿಭಾರ ಅರ್ಜಿಯನ್ನು ದಾಖಲು ಮಾಡಿರುತ್ತಾರೆ. ಏತನ್ಮಧ್ಯೆ, ಅರ್ಜಿದಾರರು ದಿನಾಂಕ:30–8–2010 ರಂದು ಸಲ್ಲಿಸಿದ ಕಾಯಿದೆ ಕಲಂ 103ರ ಅರ್ಜಿಯಲ್ಲಿ ಇತರರೊಂದಿಗೆ 27,28 ಮತ್ತು 29ನೇ ಎದುರು ಅರ್ಜಿದಾರರುಗಳ ವಿರುದ್ಧ ವಸೂಲಾತಿಗಾಗಿ ಕಾಯ್ದೆ ಕಲಂ 69 ರಡಿಯಲ್ಲಿ ಅರ್ಜಿದಾರ ಸಂಘದ ಪರವಾಗಿ ಡಿಕ್ರಿ ಕೋರಿ, ಪ್ರಕರಣ ದಾಖಲಿಸಿದ್ದು, ಸದರೀ ಹಣವು ವಸೂಲಾತಿ ಆಗದಿರುವಂತಹ ಪರಿಸ್ಥಿತಿ ಇರುವ ಪ್ರಯುಕ್ತ ಮೇಲ್ಕಂಡ ಅಧಿಭಾರ ಅರ್ಜಿಯಲ್ಲಿನ 27, 28 ಮತ್ತು 29ನೇ ಎದುರುದಾರರ ಸ್ಥಿರಾಸ್ತಿಯನ್ನು ದಾವಾ ಅರ್ಜಿಯಲ್ಲಿ ನೀಡಬಹುದಾದ ಡಿಕ್ರಿಯನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಕ್ರಮವನ್ನು ಪ್ರತಿಬಂಧಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರಡಿಯಲ್ಲಿ ತೀರ್ಪುಪೂರ್ವ ಜಪ್ತಿ ಕ್ರಮವನ್ನು ಕೋರಿದ್ದಾರೆ. ಈ ಕೋರಿಕೆ ಯುಕ್ತವಾಗಿದೆಯೆಂದು ಸ್ವತ: ಈ ನ್ಯಾಯಾಲಯದಲ್ಲಿ ಮನವರಿಕೆಯಾಗಿದ್ದು, ಈ ಕೆಳಕಂಡ ಷರತ್ತು ಪೂರ್ವ ಜಪ್ತು ಆಜ್ಞೆ ನೋಟೀಸನ್ನು ಹೊರಡಿಸಲಾಗಿದೆ.

**ಕ್ರಮಾಂಕ:ಸನಿಸಿ24/ಎಬಿಎನ್/ಕಲಂ 103/2010–11/528, ದಿನಾಂಕ:17ನೇ ಸೆಪ್ಟೆಂಬರ್ 2010**

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನಲೆಯಲ್ಲಿ ಎ.ಎಸ್. ಜಯಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 103ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿಯಲ್ಲಿ ಕಾಣಿಸಿರುವ ಸ್ಥಿರಾಸ್ತಿಯನ್ನು ಅಧಿಭಾರ ಅರ್ಜಿಯ ತೀರ್ಪು ಪೂರ್ವದ ಷರತ್ತು ಪೂರ್ವಕ ಜಪ್ತುಗೊಳಿಸಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ ಎದುರು ಅರ್ಜಿದಾರರುಗಳು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತು ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ ಜಪ್ತುಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ)ಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಶಿವಮೊಗ್ಗ ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ನಿನ ಪ್ರತಿಯನ್ನು ದಿನಾಂಕ:25–9–2010ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತು ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತು ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತು ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

| ಕ್ರ.ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ನಿವೇಶನ ಸಂ. | ನಿವೇಶನ ವಿಸ್ತೀರ್ಣ ಹಾಗೂ ಕಟ್ಟಡದ ಮಾದರಿ |
|---|---|---|---|---|
| 01 | ಬಸಪ್ಪ, ಬಿನ್ ಮಣಪ್ಪ | 35, ಗಾಡಿಕೊಪ್ಪ, ಶಿವಮೊಗ್ಗ | 2840/78 | $\frac{40 + 34}{2} \times 31$<br>ಈ ನಿವೇಶನ ಮತ್ತು ಅದರಲ್ಲಿ ನಿರ್ಮಿಸಿರುವ ಮಂಗಳೂರು ಹಂಚಿನ ಮನೆ |

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ:17–9–2010 ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ.

ಪಿಆರ್–1461

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರ ಕಾರ್ಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ವಿಷಯ:** ಸ್ಥಗಿತಗೊಂಡಿರುವ ದುರ್ವಿಗೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ದುರ್ವಿಗೆರೆ, ಚನ್ನಗಿರಿ–ತಾಲ್ಲೂಕು ದಾವಣಗೆರೆ–ಜಿಲ್ಲೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ:ಸನಿ31/ಸ್ಥಗಿತ/ದು/ಉಸಸಸಂ/ ಸಿಆರ್–10–11, ದಿನಾಂಕ:02–11–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರುಗಳ ಮಾಹಿತಿ ಲಭ್ಯವಿರುವುದಿಲ್ಲ. ಈ ಸಂಘದ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ ವರದಿಗಳು ಸಹ ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವುದೇ ರೀತಿ ಪ್ರಯೋಜನ ದೊರೆಯದ ಕಾರಣ ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ನಂ.ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್– /2010–11, ದಿನಾಂಕ:29ನೇ ನವೆಂಬರ್ 2010**

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಂಎಲ್/2008, ಬೆಂಗಳೂರು ದಿನಾಂಕ:27–05–2010 ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ದುರ್ವಿಗೆರೆ ಹಾಲು ಉತ್ಪಾದಕರ ಸಹಕಾರ ಸಂಘ ನಿ., ದುರ್ವಿಗೆರೆ ಚನ್ನಗಿರಿ–ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959 ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:29–11–2010 ರಂದು ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪನಿಬಂಧಕರು

ಪಿಆರ್–1697 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ:ಡಿಟಿಸಿಆರ್:171(ಪೋಲೀಸ್)/2009–10, ದಿನಾಂಕ:19ನೇ ಆಗಸ್ಟ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್. ನಗರ ಪೊಲೀಸ್ ಠಾಣೆ, ಮೈಸೂರು | | ರವಿ ಬಿನ್ ರಾಮೇಗೌಡ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:30–12–2009ರಂದು ಬೆಳಿಗ್ಗೆ 10–00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಕೆ.ಆರ್. ನಗರ ಪೋಲೀಸ್ ಠಾಣೆ ಇವರು ಕೆ.ಆರ್.ನಗರ ತಾಲ್ಲೂಕು ಅರ್ಕೇಶ್ವರ ದೇವಸ್ಥಾನದ ಹತ್ತಿರ ತಿಪ್ಪೂರು ಕಡೆ ಹೋಗುವ ರಸ್ತೆಯ ಪಕ್ಕದಲ್ಲಿ ಒಬ್ಬ ಅಸಾಮಿಯು **ಕೆಎ–09/ವೈ–8669 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್** ವಾಹನದಲ್ಲಿ ಅಕ್ರಮವಾಗಿ 14.400 ಲೀ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ರವಿ ಬಿನ್ ರಾಮೇಗೌಡ ಇವರನ್ನು ದಸ್ತಗಿರಿ ಮಾಡಿರುವುದಾಗಿ ಠಾಣಾ ಮೊಕದ್ದಮೆ ಸಂಖ್ಯೆ:353/2009ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತಿಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:04–05–2010 ರಂದು ಕೆ.ಆರ್. ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:30–12–2009ರಂದು ಕೆ.ಆರ್.ನಗರ ತಾಲ್ಲೂಕು ಅರ್ಕೇಶ್ವರ ದೇವಸ್ಥಾನದ ಹತ್ತಿರ ತಿಪ್ಪೂರು ಕಡೆ ಹೋಗುವ ರಸ್ತೆಯ ಪಕ್ಕದಲ್ಲಿ ಒಬ್ಬ ಅಸಾಮಿಯು **ಕೆಎ–09/ವೈ–8669 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್** ವಾಹನದಲ್ಲಿ ಅಕ್ರಮವಾಗಿ 14.400 ಲೀ ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ರವಿ ಬಿನ್ ರಾಮೇಗೌಡ ಎಂಬುವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನ ವಿವಿಧ ಜವಾಬ್ದಾರಿಗಳಿದ್ದು, ಅದನ್ನು

ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೆ ಹೊಣೆಗಾರನಾಗಿರುತ್ತೇನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (7) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಫ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಆಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/171 (ಪೋಲೀಸ್/2009–10, ದಿನಾಂಕ:19–08–2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ನಂಜನಗೂಡು ಪೋಲೀಸ್ ಠಾಣೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:353/2009, ದಿನಾಂಕ:30–12–2009 ರಂದು ವಶಪಡಿಸಿಕೊಂಡ **ಕೆಎ–09/ವೈ–8669 ನೋಂದಣಿ ಸಂಖ್ಯೆಯ ಟಿವಿಎಸ್ ಎಕ್ಸೆಲ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಆಗಸ್ಟ್ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–1698

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಗಳು**

**ವಿಷಯ** : **ಕೊಡಗು** ಜಿಲ್ಲೆ, **ಸೋಮವಾರಪೇಟೆ** ತಾಲ್ಲೂಕು, **ದೊಡ್ಡತೋಲೂರು** ಗ್ರಾಮದಲ್ಲಿ ಬ್ಲಾಕ್ ಗ್ರಾನೈಟ್‌ಗಾಗಿ **ಶ್ರೀ ಸಿ.ಎಸ್. ಮಲ್ಲಣ್ಣ** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:640ರ ಗುತ್ತಿಗೆಯನ್ನು ಗುತ್ತಿಗೆಯ ಮೇಲಿನ ಬಾಕಿ ರೂ.84,795/–ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ** : 1. ಈ ಕಛೇರಿಯ ಅಂತಿಮ ನೋಟೀಸು ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/640/2010–11/3696, ದಿನಾಂಕ:26–07–2010.
2. ಹಿರಿಯ ಭೂವಿಜ್ಞಾನಿ (ಖ) ಕೊಡಗು ರವರ 2009–10ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

**ಕೊಡಗು** ಜಿಲ್ಲೆ, **ಸೋಮವಾರಪೇಟೆ** ತಾಲ್ಲೂಕು, **ದೊಡ್ಡ ತೋಲೂರು** ಗ್ರಾಮದ ಸರ್ವೆ ನಂ.56/4 ರಲ್ಲಿ **ಶ್ರೀ ಸಿ.ಎಸ್. ಮಲ್ಲಣ್ಣ** ರವರಿಗೆ 1–00 ಎಕರೆಗೆ ದಿನಾಂಕ:25–03–2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿಗುತ್ತಿಗೆ ಸಂಖ್ಯೆ:640 ಮಂಜೂರು ಮಾಡಲಾಗಿತ್ತು. ಈ ಕಛೇರಿಯ ಉಲ್ಲೇಖಿತ ಪತ್ರದಂತೆ ಅಂತಿಮ ನೋಟೀಸ್‌ನ್ನು ಗುತ್ತಿಗೆದಾರರಿಗೆ ನಿಯಮಾನುಸಾರ ಸೂಚನಾ ಪತ್ರ ನೀಡಿ 2010ರ ಮಾರ್ಚ್ ಅಂತ್ಯದವರೆಗೆ ಬಾಕಿ ರೂ.84,795/–ಗಳನ್ನು 60 ದಿನಗಳೊಳಗೆ ಸಂದಾಯಿಸುವಂತೆ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಡಿ ನೋಟೀಸು ಜಾರಿಗೊಳಿಸಲಾಗಿತ್ತು, ಆದರೆ ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ ಹಾಗೂ ಗುತ್ತಿಗೆಯು ನಿಷ್ಕ್ರಿಯವಾಗಿರುವುದಾಗಿ ಹಿರಿಯ ಭೂ ವಿಜ್ಞಾನಿ (ಖ) ಕೊಡಗು ರವರು ವರದಿ ಮಾಡಿರುತ್ತಾರೆ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರ ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸುಗಳಿಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ: ಸಿಐ 418 ಎಂ.ಆರ್.ಸಿ. 92 ದಿನಾಂಕ:02–07–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:640ನ್ನು ರದ್ದುಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾದ್ದರಿಂದ ಈ ಕೆಳಗಿನಂತೆ ಆದೇಶ.

**ಆದೇಶ**

**ಆದೇಶ ಸಂಖ್ಯೆ: ಗಭೂಇ/ಡಿಸಿಬಿ/ಕಗಗು/640/2010–11/11797, ದಿನಾಂಕ 11ನೇ ನವೆಂಬರ್ 2010**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಕೊಡಗು** ಜಿಲ್ಲೆ **ಸೋಮವಾರಪೇಟೆ** ತಾಲ್ಲೂಕು ದೊಡ್ಡತೋಲೂರು ಗ್ರಾಮದ ಸರ್ವೆ ನಂ:**56/4** ರಲ್ಲಿ 1–00 ಎಕರೆಗೆ ಬ್ಲಾಕ್ ಗ್ರಾನೈಟ್‌ಗಾಗಿ ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:640ರ ಮೇಲಿನ ರಾಜಧನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ. ಹಾಗೂ ಈ ಗುತ್ತಿಗೆಗೆ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಗೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಪಿಆರ್–1619

**ನಿರ್ದೇಶಕರು**

**ಕರ್ನಾಟಕ ಲೋಕಸೇವಾ ಆಯೋಗ**

**ವಿಷಯ** : 2010ನೇ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಎಸಗಿರುವ ದುರಾಚಾರ ಪ್ರಕರಣಕ್ಕೆ ದಂಡನೆ ವಿಧಿಸುವ ಕುರಿತು.

**ಓದಲಾಗಿದೆ :** (1) ಮೇಲ್ವಿಚಾರಕರು ವಿದ್ಯಾದಾನ ಸಮಿತಿಯ ಬಾಲಕಿಯರ ಸಂಯುಕ್ತ ಪದವಿ ಪೂರ್ವ ಕಾಲೇಜ್ ಗದಗದ ಇವರ ಪತ್ರ ದಿನಾಂಕ: 12–06–2010

(2) ಶ್ರೀ ಹೀರಾಲಾಲ್ ಅರವಿಂದ ಚವ್ಹಾಣ್ ಇವರಿಗೆ ಆಯೋಗದ ನೋಟೀಸ್ ಜಾರಿ ಮಾಡಿದ ಸಂಖ್ಯೆ:ಇಪ(1)2122/2010–11/ಪಿಎಸ್‌ಸಿ/ದಿನಾಂಕ: 27–9–2010ರ.

(3) ಶ್ರೀ ಹೀರಾಲಾಲ್ ಅರವಿಂದ ಚವ್ಹಾಣ್ ಇವರ ದಿನಾಂಕ: 13–10–2010ರ ಹೇಳಿಕೆ.

**ಪ್ರಸ್ತಾವನೆ:**

2010ನೇ ಸಾಲಿನ ಪ್ರಥಮ ಅಧಿವೇಶನದ ಇಲಾಖಾ ಪರೀಕ್ಷೆಯಲ್ಲಿ ಜನರಲ್ ಲಾ ಭಾಗ–1 ಪತ್ರಿಕೆ–2ರ ವಿಷಯದ ಇಲಾಖಾ ಪರೀಕ್ಷೆಯಲ್ಲಿ ಶ್ರೀ ಹೀರಾಲಾಲ್ ಅರವಿಂದ ಚವ್ಹಾಣ್ ನೋ.ಸಂ.53279 ವೈದ್ಯಾಧಿಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರ ಸೂರಣಗಿ ಅಂಚೆ, ಶಿರಹಟ್ಟಿ ತಾಲ್ಲೂಕು, ಗದಗ್ ಜಿಲ್ಲೆ, ಇವರು ದಿನಾಂಕ:12–06–2010 ರಂದು ಗದಗ ಉಪಕೇಂದ್ರ ವಿದ್ಯಾದಾನ ಸಮಿತಿಯ ಬಾಲಕಿಯರ ಸಂಯುಕ್ತ ಪದವಿ ಪೂರ್ವ ಕಾಲೇಜ್, ಗದಗ, ಪರೀಕ್ಷಾ ಕೊಠಡಿಯಲ್ಲಿ ಜನರಲ್ ಲಾ ಭಾಗ–1 ಪತ್ರಿಕೆ–2ರ ವಿಷಯದ ಪ್ರಶ್ನೆ ಪತ್ರಿಕೆ **"ಡಿ"** ಶ್ರೇಣಿಯನ್ನು ಹೊರಗಡೆ ಕಳುಹಿಸಿ ತದನಂತರ **"ಡಿ"** ಶ್ರೇಣಿಯ ಪ್ರಶ್ನೆ ಪತ್ರಿಕೆ ಹೊರಗಡೆಯಿಂದ ಬಂದ ನಂತರ ಅದನ್ನು ಉಪಯೋಗಿಸಿ ಪರೀಕ್ಷಾ ಕೊಠಡಿಯಲ್ಲಿ ಅಶಾಂತಿ ವಾತಾವರಣವನ್ನುಂಟು ಮಾಡಿರುತ್ತಾರೆ ಎಂದು ಪರೀಕ್ಷಾ ಮೇಲ್ವಿಚಾರಕರು ಉಲ್ಲೇಖ(1)ರಲ್ಲಿ ವರದಿ ಸಲ್ಲಿಸಿದ್ದು ಈ ಮೇಲ್ಕಂಡ ಅಭ್ಯರ್ಥಿಗೆ ಉಲ್ಲೇಖ(2)ರಲ್ಲಿ ನೋಟೀಸ್ ಜಾರಿ ಮಾಡಿ ಸಮಜಾಯಿಸಿಯನ್ನು ಸಲ್ಲಿಸಲು ಸೂಚಿಸಲಾಗಿತ್ತು. ಸದರಿ ನೋಟೀಸಿಗೆ ಉತ್ತರವಾಗಿ ಉಲ್ಲೇಖ(3)ರಲ್ಲಿ ಅಭ್ಯರ್ಥಿಯು ಅವರ ವಿರುದ್ಧ ಮಾಡಿದ ಆರೋಪವನ್ನು ಒಪ್ಪಿಕೊಂಡಿರುತ್ತಾರೆ.

ಸದರಿ ಅಭ್ಯರ್ಥಿಯ ಮೇಲಿನ ಆರೋಪವು ಸಾಭೀತಾಗಿದ್ದು ಕರ್ನಾಟಕ ಲೋಕಸೇವಾ ಆಯೋಗದ (ಸೇವಾ ಪರೀಕ್ಷೆಗಳ ನಿರ್ವಹಣೆ) ನಿಯಮಗಳ 1965ರನ್ವಯ ಅವರಿಗೆ ದಂಡನೆ ವಿಧಿಸುವುದು ಸೂಕ್ತವೆಂದು ಆಯೋಗವು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಮಾಡಿದೆ.

**ಆದೇಶ ಸಂಖ್ಯೆ:ಇಪ(1)2232/2010–11/ಪಿಎಸ್‌ಸಿ ಬೆಂಗಳೂರು, ದಿನಾಂಕ 8ನೇ ನವೆಂಬರ್ 2010**

ಕರ್ನಾಟಕ ಲೋಕಸೇವಾ ಆಯೋಗ (ಸೇವಾ ಪರೀಕ್ಷೆಗಳ ನಿರ್ವಹಣೆ) 1965ರ ನಿಯಮ 14ರ ಹಾಗೂ ತತ್ಸಂಬಂಧಲ್ಲಿ ಹೊರಡಿಸಲಾಗಿರುವ ಆಯೋಗದ ಅಧಿಕೃತ ಜ್ಞಾಪನಪತ್ರ ಆಡಳಿತ:398/93–94/ಪಿಎಸ್‌ಸಿ ದಿನಾಂಕ:14–07–1993ರಲ್ಲಿನಂತೆ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ಹೀರಾಲಾಲ್ ಅರವಿಂದ ಚವ್ಹಾಣ್ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸೂರಣಗಿ ಅಂಚೆ, ಶಿರಹಟ್ಟಿ ತಾಲ್ಲೂಕು, ಗದಗ್ ಜಿಲ್ಲೆ, ಇವರಿಗೆ 2010ನೇ ಸಾಲಿನ ಪ್ರಥಮ ಅಧಿವೇಶನದ ಅಭ್ಯರ್ಥಿತ್ವವನ್ನು ರದ್ದುಗೊಳಿಸಿ ಮುಂದಿನ ನಾಲ್ಕು ಅಧಿವೇಶನಗಳಿಗೆ ಡಿಬಾರ್ ಮಾಡಲಾಗಿದೆ

ಆಯೋಗದ ಆದೇಶದ ಮೇರೆಗೆ,

**ವಿ.ಬಿ. ಪಾಟೀಲ್,**

ಕಾರ್ಯದರ್ಶಿ ಹಾಗೂ ನಿಯಂತ್ರಕರು, ಇಲಾಖಾ ಪರೀಕ್ಷೆಗಳು

ಕರ್ನಾಟಕ ಲೋಕಸೇವಾ ಆಯೋಗ

ಪಿಆರ್–1615

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**

**ಸಂಖ್ಯೆ:ಡಿಟಿಸಿಆರ್:188 (ಪೋಲೀಸ್)/2008–09, ದಿನಾಂಕ:19ನೇ ಆಗಸ್ಟ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು.

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ ಮೈಸೂರು ಜಿಲ್ಲೆ | | ಗುರು @ ಶಾಮ ಬಿನ್ ತಿಮ್ಮೇಗೌಡ ಕೆ.ಆರ್.ನಗರ ತಾಲ್ಲೂಕು. |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:3–05–2010ರಂದು ಸಂಜೆ 6–00 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಜಿಲ್ಲೆ ಇವರು ಕೆ.ಆರ್.ನಗರ ಟೌನ್, ಹಾಸನ–ಮೈಸೂರು ಮುಖ್ಯ ರಸ್ತೆ, ಶ್ರೀ ವೆಂಕಟೇಶ್ವರ ಚಿತ್ರಮಂದಿರದ ಮುಂಭಾಗ **ಕೆಎ–05/ಇಜಿ–5944** ನೋಂದಣಿ ಸಂಖ್ಯೆಯ **ಟಿವಿಎಸ್ ಮೊಪೆಡ್** ವಾಹನದಲ್ಲಿ ಅಕ್ರಮವಾಗಿ 17,280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿಯಾದ ಗುರು @ ಶಾಮ ಇವರನ್ನು ದಸ್ತಗಿರಿ ಮಾಡಿರುವುದಾಗಿ ಠಾಣಾ ಮೊಕದ್ದಮೆ ಸಂಖ್ಯೆ:22/2010ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿನಾಂಕ:06–05–10 ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:11–05–10 ರಂದು ಕೆ.ಆರ್. ನಗರ ವಲಯದ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಿರುತ್ತಾರೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:03–05–2010ರಂದು ಕೆ.ಆರ್. ನಗರ ಟೌನ್, ಹಾಸನ–ಮೈಸೂರು ಮುಖ್ಯ ರಸ್ತೆ, ಶ್ರೀ ವೆಂಕಟೇಶ್ವರ ಚಿತ್ರಮಂದಿರದ ಮುಂಭಾಗ **ಕೆಎ–05/ಇಜಿ–5944** ನೋಂದಣಿ ಸಂಖ್ಯೆಯ ಟಿವಿಎಸ್ ಮೊಪೆಡ್ ವಾಹನದಲ್ಲಿ ಅಕ್ರಮವಾಗಿ 17,280 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಈ ಸಂದರ್ಭದಲ್ಲಿ ಆರೋಪಿಯಾದ ಗುರು @ ಶಾಮ ಬಿನ್ ತಿಮ್ಮೇಗೌಡ ಎಂಬುವರನ್ನು ಸ್ಥಳದಲ್ಲಿ ದಸ್ತಗಿರಿ ಮಾಡಲಾಗಿರುತ್ತದೆ. ಅರ್ಜಿದಾರರ ಮೇಲೆ ಕಲಂ 43(ಬಿ)(2)ರ ಅಡಿಯಲ್ಲಿ ಕಾನೂನಿನ ವಿವಿಧ ಜವಾಬ್ದಾರಿಗಳಿದ್ದು, ಅದನ್ನು ನಿರ್ವಹಿಸುವ ಆದ್ಯ ಕರ್ತವ್ಯ ಅರ್ಜಿದಾರರ ಮೇಲಿದ್ದು, ಈ ಕಾರಣದಿಂದಾಗಿ ಆತ ನೇರವಾಗಿ ಈ ಪ್ರಕರಣದಲ್ಲಿ ಭಾಗಿಯಾಗಿಲ್ಲದಿದ್ದರೂ ಕೂಡಾ ಪರೋಕ್ಷವಾಗಿ ಆತನೇ ಹೊಣೆಗಾರನಾಗಿರುತ್ತಾನೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ / ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/188(ಪೋಲೀಸ್/2009–10, ದಿನಾಂಕ:19–08–2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಬಿ)ರ ಪ್ರಕಾರ ಅನುಸರಿಸಬೇಕಾದ ಕ್ರಮಗಳನ್ನೆಲ್ಲಾ ಅನುಸರಿಸಿದ ನಂತರ ಕಲಂ 43(ಎ)(2) ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಜಿಲ್ಲೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:22/2010, ದಿನಾಂಕ:3–05–2010ರಂದು ವಶಪಡಿಸಿಕೊಂಡ ಹತ್ತಿರ **ಕೆಎ–05/ಇಜಿ–5944 ನೋಂದಣಿ ಸಂಖ್ಯೆಯ ಟಿವಿಎಸ್ ಮೊಪೆಡ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಆಗಸ್ಟ್ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–1699

## ಸಹಕಾರ ಇಲಾಖೆ

### ಸಹಕಾರ ಸಂಘಗಳ ಸಂಯುಕ್ತ ನಿಬಂಧಕರ ಕಾರ್ಯಾಲಯ, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು–18

**ಸಂಖ್ಯೆ: ಜೆಆರ್‌ಬಿ/ಸಮಾಪನೆ/ರದ್ದತಿ/142/2009–10, ಬೆಂಗಳೂರು, ದಿನಾಂಕ:9ನೇ ಡಿಸೆಂಬರ್, 2010**

**ವಿಷಯ:** ಸಮಾಪನೆಯಲ್ಲಿರುವ ಚಳ್ಳಕೆರೆ ತಾಲ್ಲೂಕು ಸಣ್ಣ ಮತ್ತು ಅತಿಸಣ್ಣ ರೈತರ ಸಾಮುದಾಯಿಕ ನೀರಾವರಿ ಸಹಕಾರ ಸಂಘ ನಿಯಮಿತ ಚಳ್ಳಕೆರೆ, ಇದರ ನೋಂದಣಿಯನ್ನು ರದ್ದು ಮಾಡುವ ಬಗ್ಗೆ.

**ಉಲ್ಲೇಖ:**
1) ಈ ಕಛೇರಿಯ ಸಮಸಂಖ್ಯೆಯ ಆದೇಶ ಸಂಖ್ಯೆ:ಜೆಆರ್‌ಬಿ/ಸಮಾಪನೆ/70/98, ದಿನಾಂಕ:22–02–2000.
2) ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ, ಇವರ ಪತ್ರದ ಸಂಖ್ಯೆ: ಸಶಿಅ.ಚಳ್ಳಕೆರೆ/ಸಮಾಪನೆ/ಆಸರೈ/ ಸಾನಿಸಂ/ರದ್ಧತಿ/05–06, ದಿನಾಂಕ:28–04–2006.
3) ಈ ಕಛೇರಿಯ ಪತ್ರದ ಸಂಖ್ಯೆ:ಜೆಆರ್‌ಬಿ/ಸಮಾಪನೆ/ರದ್ಧತಿ/2008–09, ದಿನಾಂಕ:19–03–2009.
4) ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ, ಇವರ ಪತ್ರದ ಸಂಖ್ಯೆ: ಡಿಆರ್‌ಡಿ/ಸಮಾಪನೆ/ ಸಿಆರ್–14/ರದ್ಧತಿ/2006–07, ದಿನಾಂಕ:18–10–2010.

**ಪ್ರಸ್ತಾವನೆ:**

ಚಳ್ಳಕೆರೆ ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮೂದಾಯಿಕ ನೀರಾವರಿ ಸಹಕಾರ ಸಂಘ ನಿ, ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ, ಈ ಸಂಘವು ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಇವರಲ್ಲಿ ಸಂಖ್ಯೆ: ಡಿಆರ್‌ಸಿಡಿ/ಆರ್‌ಎಸ್‌ಆರ್/ಆರ್‌ಜಿಎಲ್‌ಐಸಿಎಸ್/7068/1981–82, ದಿನಾಂಕ:23–02–1982 ರಂದು ನೋಂದಣಿಯಾಗಿರುತ್ತದೆ. ಚಿತ್ರದುರ್ಗ ಜಿಲ್ಲೆಯಲ್ಲಿ ಡಿ.ಐ.ಎ.ಡಿ ಯೋಜನೆಯು ಅಸ್ತಿತ್ವದಲ್ಲಿ ಇದ್ದು, ಸದರಿ ಯೋಜನೆಯಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರ ಜಮೀನುಗಳಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಿಕೊಡುವ ಮೂಲ ಉದ್ದೇಶದಿಂದ ಈ ಸಹಕಾರ ಸಂಘವು ಅಸ್ತಿತ್ವಕ್ಕೆ ಬಂದಿರುತ್ತದೆ.

ಸದರಿ ಸಂಘದ ಅಧ್ಯಕ್ಷರಾಗಿ ಚಿತ್ರದುರ್ಗ ಜಿಲ್ಲಾ ಉಪವಿಭಾಗಾಧಿಕಾರಿಗಳನ್ನು, ಆಡಳಿತ ಮಂಡಳಿಯ ಸದಸ್ಯರನ್ನಾಗಿ, ವಿವಿಧ ಇಲಾಖೆಗಳ ತಾಲ್ಲೂಕುಮಟ್ಟದ ಅಧಿಕಾರಿಗಳನ್ನು ಹಾಗೂ 10 ಜನ ರೈತರ ಸದಸ್ಯರನ್ನು ಆಡಳಿತ ಮಂಡಳಿಗೆ ಆಯ್ಕೆ ಮಾಡಲಾಗಿದ್ದು, ಸದರಿ ಯೋಜನೆಯಡಿ 1981–82 ರಿಂದ ದಿನಾಂಕ:30–6–1985 ರವರೆಗೆ ಕಾರ್ಯಚಟುವಟಿಕೆಗಳನ್ನು ನಡೆಸಿದ್ದು, ನಂತರ ರೈತರ ಜಮೀನಿನಲ್ಲಿ ಕೊರೆಸಲಾಗಿರುವ ಬೋರ್‌ವೆಲ್‌ಗಳ ಅಂತರ್ಜಲ ಕುಸಿತದಿಂದ ಬತ್ತಿಹೋಗಿದ್ದು. ಇದಕ್ಕೆ ಅಳವಡಿಸಿರುವ ಪಂಪ್‌ಸೆಟ್‌ಗಳೂ ಸಹ ಸೂಕ್ತ ಮೇಲ್ವಿಚಾರಣೆ ಇಲ್ಲದೇ ಶಿಥಿಲಗೊಂಡು ಕೆಲಸಕ್ಕೆ

ಬಾರದೇ ಹಾಳಾಗಿರುವ ಪ್ರಯುಕ್ತ ಸದರಿ ಯೋಜನೆಯು ವಿಫಲವಾಗಿ ಸದರಿ ಸಂಘವು 1985–86ನೇ ಸಾಲಿನಿಂದ ಯಾವುದೇ ಕಾರ್ಯಚಟುವಟಿಕೆಗಳನ್ನು ನಡೆಸದೆ ಇರುವುದರಿಂದ ಸಂಘವನ್ನು ಉಲ್ಲೇಖ(1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ, ಚಳ್ಳಕೆರೆ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಲಾಗಿತ್ತು.

ಸಮಾಪನಾಧಿಕಾರಿಗಳು ಸಂಘದ ಅಸ್ತಿತ್ವದಿಂದ ಸಂಘದ ಸದಸ್ಯರಿಗಾಗಲೀ ಅಥವಾ ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲವಾದುದರಿಂದ ಸಂಘದ ಆಸ್ತಿ–ಜವಾಬ್ದಾರಿಯನ್ನು ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಪಡಿಸುವಂತೆ ಕೋರಿರುವುದಾಗಿ ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ, ಇವರು ಉಲ್ಲೇಖ (4)ರಲ್ಲಿ ತಿಳಿಸಿರುತ್ತಾರೆ.

ಮೇಲಿನ ಕಾರಣದಿಂದ ಹಾಗೂ ಉಪ ನಿಬಂಧಕರ ವರದಿಯ ಮೇರೆಗೆ ಸಂಘದ ನೋಂದಣಿಯನ್ನು ರದ್ದುಪಡಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**"ಆದೇಶ"**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್ಎಂ/2008, ದಿನಾಂಕ:27–05–2010ರ ಪ್ರಕಾರ ದತ್ತವಾದ ಅಧಿಕಾರದನ್ವಯ ಚಳ್ಳಕೆರೆ ತಾಲ್ಲೂಕು ಸಣ್ಣ ಮತ್ತು ಅತಿ ಸಣ್ಣ ರೈತರ ಸಾಮುದಾಯಿಕ ನೀರಾವರಿ ಸಹಕಾರ ಸಂಘ ನಿ., ಚಳ್ಳಕೆರೆ, ಚಿತ್ರದುರ್ಗ ಜಿಲ್ಲೆ, ಇದರ ನೋಂದಣಿ ಸಂಖ್ಯೆ: ಡಿಆರ್‌ಪಿಡಿ/ಆರ್‌ಎಸ್‌ಆರ್/ಆರ್‌ಜಿ/ಎಲ್ಐಸಿಎಸ್/7068/1981–82, ದಿನಾಂಕ:23–02–1982ನ್ನು ರದ್ದುಗೊಳಿಸಿ ಆದೇಶಿಸಲಾಗಿದೆ. ಈ ರದ್ದತಿಯು ಆದೇಶದ ದಿನಾಂಕದಿಂದ ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು.

ಸಮಾಪನಾಧಿಕಾರಿಗಳು ಸಂಘದ ಸಮಸ್ತ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಹಸ್ತಾಕ್ಷರ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:9–12–2010ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು.
ಬೆಂಗಳೂರು ಪ್ರಾಂತ, ಬೆಂಗಳೂರು.

ಪಿಆರ್–1782

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ಸಂಖ್ಯೆ: ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್/6/2009–10, ಚಿತ್ರದುರ್ಗ, ದಿನಾಂಕ:30ನೇ ಸೆಪ್ಟೆಂಬರ್, 2010**

**ವಿಷಯ:** ಸ್ಥಗಿತಗೊಂಡಿರುವ ಸೆಂಟ್ರಲ್ ಟೀಚರ್ಸ್ ಸಹಕಾರ ಸಂಘ ನಿ, ಹಿರಿಯೂರು ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ:30/ಸಮಾಪನೆ/ಸಿಆರ್:23/08–09 ದಿನಾಂಕ: 09–02–2009.

2) ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ: 19–01–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಸೆಂಟ್ರಲ್ ಟೀಚರ್ಸ್ ಸಹಕಾರ ಸಂಘ ನಿ, ಹಿರಿಯೂರು ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ: ಎಆರ್‌ಸಿ: 68 44–45 ದಿನಾಂಕ:12–04–1944 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2)ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿಸಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ/201/ಸಿಎಲ್ಎಂ/2008/ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂದಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಸೆಂಟ್ರಲ್ ಟೀಚರ್ಸ್ ಸಹಕಾರ ಸಂಘ ನಿ. ಹಿರಿಯೂರು ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಹಿರಿಯೂರು ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:30–09–2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್–1694

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ಕಛೇರಿ**

**ಸಂಖ್ಯೆ: ಡಿಆರ್‌ಡಿ/ಎಲ್‌ಕ್ಯೂಡಿ/ಸಿಆರ್/7/2009–10, ದಿನಾಂಕ:30ನೇ ಸೆಪ್ಟೆಂಬರ್, 2010**

**ವಿಷಯ:** ಸ್ಥಗಿತಗೊಂಡಿರುವ ಶ್ರೀ ಗಂಗಾಧರೇಶ್ವರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಶಿವಗಂಗ ಹೊಳಲ್ಕೆರೆ ತಾಲ್ಲೂಕು ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73ರನ್ವಯ ಸಮಾಪನೆ ಬಗ್ಗೆ.

**ಉಲ್ಲೇಖ:** 1. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಇವರ ಪತ್ರದ ಸಂ:ಸನಿ/30/ಸಮಾಪನೆ/ಸಿಆರ್:34/09–10, ದಿನಾಂಕ: 11–01–2010.

2. ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮ ಸಂಖ್ಯೆ ದಿನಾಂಕ: 20–01–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿತ್ರದುರ್ಗ ಉಪ ವಿಭಾಗ, ಚಿತ್ರದುರ್ಗ ಇವರು ಉಲ್ಲೇಖ (1)ರಲ್ಲಿ ಕಾಣಿಸಿದ ಪ್ರಸ್ತಾವನೆ ಪ್ರಕಾರ ಶ್ರೀ ಗಂಗಾಧರೇಶ್ವರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ. ಶಿವಗಂಗ ಹೊಳಲ್ಕೆರೆ ತಾಲ್ಲೂಕು ಸಂಘದ ನೋಂದಣಿ ಸಂಖ್ಯೆ: ಸನಿ:30:46/ಆರ್‌ಜಿಎನ್/30455/2000–01 ದಿನಾಂಕ:06–11–2000 ಈ ಸಂಘದ ಕಾರ್ಯ ಚಟುವಟಿಕೆಗಳು ಅನೇಕ ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಹರಿಸುವಲ್ಲಿ ವಿಫಲರಾಗಿರುತ್ತಾರೆ ಮತ್ತು ಸಂಘವನ್ನು ಪುನ:ಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲವೆಂದು ಪ್ರಸ್ತಾವನೆ ಸಲ್ಲಿಸಿ, ಸಂಘವನ್ನು ಸಮಾಪನೆಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ಉಲ್ಲೇಖ (2)ರ ನೋಟೀಸನ್ನು ಈ ಕಛೇರಿಯಿಂದ ನೀಡಿದ್ದು, ಸಂಘದ ಆಡಳಿತ ಮಂಡಳಿಯವರಿಗೆ ನೋಟೀಸು ಜಾರಿ ಮಾಡಿ ಸ್ವೀಕೃತಿ ಈ ಕಛೇರಿಗೆ ತಲುಪಿಸಿದ್ದು, ಆದಾಗ್ಯೂ ಅವರು ಯಾವುದೇ ಸಮಜಾಯಿಸಿ ಅಥವಾ ಪ್ರತಿಕ್ರಿಯೆಯನ್ನು ನೀಡದೇ ನಿರುತ್ಸಾಹ ತೋರಿಸಿರುತ್ತಾರೆ. ಈ ಸಂಘದಿಂದ ಸಂಘದ ಸದಸ್ಯರಿಗೆ ಯಾವ ರೀತಿಯ ಪ್ರಯೋಜನವೂ ದೊರೆಯುತ್ತಿಲ್ಲ, ಇದರಿಂದ ಸಂಘವು ಪುನ:ಶ್ಚೇತನಗೊಳಿಸುವ ಹಂತವನ್ನು ಮೀರಿರುತ್ತದೆ. ಸಂಘವನ್ನು ಇದೇ ರೀತಿ ಮುಂದುವರಿಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2) ರನ್ವಯ ಸರ್ಕಾರದ ಅಧಿಸೂಚನೆ ನಂ:ಸಿಓ/201/ಸಿಎಲ್‌ಎಂ/2008/ಬೆಂಗಳೂರು ದಿನಾಂಕ:27–05–2010 ಪ್ರಕಾರ ದತ್ತವಾದ ಅಧಿಕಾರದನ್ವಯ ಇಲ್ಯಾಸ್ ಉಲ್ಲಾ ಷರೀಫ್ ಸಹಕಾರ ಸಂಘಗಳ ಉಪನಿಬಂಧಕರು, ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ಆದ ನಾನು ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಶ್ರೀ ಗಂಗಾಧರೇಶ್ವರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಶಿವಗಂಗ ಹೊಳಲ್ಕೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಅನ್ವಯ ಸಹಕಾರ ಸಂಘಗಳ ನಿರೀಕ್ಷಕರು, ಹೊಳಲ್ಕೆರೆ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 73 (1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನಾಂಕ:30–09–2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿಆರ್–1695

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಕೆ.ಎಸ್.ಆರ್.ಟಿ.ಸಿ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ. ದಾವಣಗೆರೆ, ಇದರ ನೋಂದಣಿ ಸಂಖ್ಯೆಯನ್ನು ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–35/2004–05, ದಿನಾಂಕ:24–08–2005.

2) ಸಮಾಪನಾಧಿಕಾರಿಗಳ ಪ್ರಸ್ತಾವನೆ ಸಂ: ಸಸಂಹಿನಿ/ಕೆಎಸ್‌ಆರ್‌ಟಿಸಿನೌಗೃ/ನೋರ/10–11, ದಿನಾಂಕ:27–10–2010.

3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ಸಂ: ಸನಿ31/ಸಮಾಪನೆ/ಕೆಎಸ್‌ಆರ್‌ಟಿಸಿನೌಗೃ/ನೋರ/04–05, ದಿನಾಂಕ:27–10–2010.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಸಹಕಾರ ಸಂಘವು ನೋಂದಣಿ ಸಂಖ್ಯೆ:ಸನಿ31/ಇಓಆರ್‌ಜಿ/12253/85–86 ದಿನಾಂಕ:19–12–1985 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರ ದಿನಾಂಕ:24–8–2005ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು 1ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಈ ಕಛೇರಿಯ ಆದೇಶ ಸಂ:ಡಿಆರ್/ಡಿವಿಜಿ/ಎಲ್‌ಕ್ಯೂಡಿ/2010–11 ದಿನಾಂಕ:13–8–2010ರಂದು ಸಹಕಾರ ಸಂಘಗಳ ನಿರೀಕ್ಷಕರು 1ನೇ ವೃತ್ತ, ದಾವಣಗೆರೆ ಇವರ ಬದಲು ಶ್ರೀ ಟಿ. ಚನ್ನಬಸಪ್ಪ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಇವರನ್ನು ಸಮಾಪನಾಧಿಕಾರಿಯನ್ನಾಗಿ ಆದೇಶವನ್ನು ಮಾರ್ಪಡಿಸಲಾಗಿತ್ತು.

ಸಮಾಪನಾಧಿಕಾರಿಗಳು ಪ್ರಭಾರ ವಹಿಸಿಕೊಳ್ಳಲು ಸಂಘದ ಯಾವುದೇ ದಾಖಲಾತಿಗಳು ಲಭ್ಯವಿಲ್ಲದೇ ಇರುವುದರಿಂದ ಸ್ಥಳೀಯ ಪತ್ರಿಕೆ ಮೂಲಕ ಪ್ರಕಟಣೆ ನೀಡಿದ್ದು, ಪ್ರಕ್ರಿಯೆಯನ್ನು ಪೂರ್ಣಗೊಳಿಸಿ ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಮತ್ತು ಸಂಘದ ಉಳಿತಾಯ ಖಾತೆಯಲ್ಲಿದ್ದ ರೂ.51,002–00 ಗಳಲ್ಲಿ ಸಮಾಪನಾಧಿಕಾರಿಗಳು ಸಂಭಾವನೆ, ಪತ್ರಿಕಾ ಪ್ರಕಟಣೆ ಹಾಗೂ ಇನ್ನಿತರೆ ವೆಚ್ಚಗಳನ್ನು ಭರಿಸಿದ್ದು, ಈ ಪೈಕಿ ಹೆಚ್ಚುವರಿಯಾಗಿ ಉಳಿದ ಮೊಬಲಗು ರೂ. 44,000–00 ಗಳನ್ನು ಸಹಕಾರ ಅಭಿವೃದ್ಧಿ ನಿಧಿ ಖಾತೆಗೆ ವರ್ಗಾಯಿಸಿರುವ ಬಗ್ಗೆ ಉಲ್ಲೇಖ (2)ರಲ್ಲಿ ತಿಳಿಸಿರುತ್ತಾರೆ.

ಸಂಘದ ನೋಂದಣಿ ಸಂಖ್ಯೆ ರದ್ದತಿಗಾಗಿ ಪ್ರಸ್ತಾವನೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಮುಖಾಂತರ ಉಲ್ಲೇಖ (3)ರಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸಮಾಪನೆಗೊಂಡ ಕೆ.ಎಸ್.ಆರ್.ಟಿ.ಸಿ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ. ದಾವಣಗೆರೆ, ದಾವಣಗೆರೆ ಜಿಲ್ಲೆ ಇದರ ನೋಂದಣಿ ಸಂಖ್ಯೆ:ಸನಿ31/ಇಓಆರ್‌ಜಿ/12253/85–86 ದಿನಾಂಕ:19–12–1985 ಸಂಘದ ಸಮಾಪನೆ ಕಾರ್ಯಚಟುವಟಿಕೆಗಳನ್ನು ಪೂರ್ಣಗೊಳಿಸಿರುವುದರಿಂದ ನೋಂದಣಿ ರದ್ದತಿಯ ಆದೇಶವನ್ನು ನೀಡುವಂತೆ ಶಿಫಾರಸ್ಸಿನೊಂದಿಗೆ ಉಲ್ಲೇಖ(3)ರಲ್ಲಿ ಪ್ರಸ್ತಾವನೆಯನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ: ಆರ್‌ಡಿ/ಡಿವಿಜಿ:/ನೋಸಂರ/ಸಿಆರ್–35/2010–11, ಚಿತ್ರದುರ್ಗ, ದಿನಾಂಕ:30ನೇ ಅಕ್ಟೋಬರ್, 2010**

**"ಆದೇಶ"**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್‌ಎಂ/2008, ಬೆಂಗಳೂರು ದಿನಾಂಕ:27–5–2010ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ.ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಕೆ.ಎಸ್.ಆರ್.ಟಿ.ಸಿ. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ ನಿ, ದಾವಣಗೆರೆ, ದಾವಣಗೆರೆ ಜಿಲ್ಲೆ ಇದರ ನೋಂದಣಿ ಸಂಖ್ಯೆ:ಸನಿ31/ಇಓಆರ್‌ಜಿ/12253/85–86 ದಿನಾಂಕ:19–12–1985ಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್)ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:30–10–2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.
ದಾವಣಗೆರೆ ಜಿಲ್ಲೆ, ದಾವಣಗೆರೆ.

ಪಿಆರ್–1681

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ಸಂಖ್ಯೆ: ಡಿಆರ್/ಡಿವಿಜಿ:/ಎಲ್‌ಕ್ಯೂಡಿ/ಸಿಆರ್–/2010–11, ದಿನಾಂಕ:29ನೇ ನವೆಂಬರ್, 2010**

**ವಿಷಯ:** ಸ್ಥಗಿತಗೊಂಡಿರುವ ಗೌರಾಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಗೌರಾಪುರ, ಚನ್ನಗಿರಿ–ತಾ: ದಾವಣಗೆರೆ–ಜಿಲ್ಲೆ, ಇದನ್ನು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ಮತ್ತು 73 ರನ್ವಯ ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವನೆ ಸಂಖ್ಯೆ:ಸನಿ31/ಸ್ಥಗಿತ/ಗೌಅಉಸಸಸಂ/ಸಿಆರ್–/10–11, ದಿನಾಂಕ:12–11–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರು ಉಲ್ಲೇಖ (1)ರಲ್ಲಿ ಸಲ್ಲಿಸಿದ ಪ್ರಸ್ತಾವನೆ ಪ್ರಕಾರ ವಿಷಯ ಸೂಚಿತ ಸಂಘದ ಕಾರ್ಯಚಟುವಟಿಕೆಗಳು ಹಲವು ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಸಂಘದ ಆಡಳಿತ ಸಮಿತಿಯವರು ಸಂಘದ ಅಭಿವೃದ್ಧಿ ಬಗ್ಗೆ ಗಮನಿಸುವಲ್ಲಿ ವಿಫಲವಾಗಿರುತ್ತಾರೆ ಮತ್ತು ಸಂಘವನ್ನು ಪುನಶ್ಚೇತನಗೊಳಿಸುವಲ್ಲಿ ಆಸಕ್ತಿ ಇರುವುದಿಲ್ಲ. ಸಂಘದ ಆಡಳಿತ ಮಂಡಳಿ ನಿರ್ದೇಶಕರುಗಳ ಮಾಹಿತಿ ಲಭ್ಯವಿರುವುದಿಲ್ಲ. ಈ ಸಂಘದ ಲೆಕ್ಕಪುಸ್ತಕಗಳು, ಲೆಕ್ಕಪರಿಶೋಧನಾ ವರದಿಗಳು ಸಹ ಲಭ್ಯವಿರುವುದಿಲ್ಲ. ಈ ಸಂಘದಿಂದ ಸದಸ್ಯರಿಗೆ ಯಾವುದೇ ರೀತಿ ಪ್ರಯೋಜನ ದೊರೆಯದ ಕಾರಣ ಇದೇ ರೀತಿ ಮುಂದುವರೆಸಲು ಬಿಟ್ಟಲ್ಲಿ ಸಂಘವು ಇನ್ನಷ್ಟು ಅಧೋಗತಿಗೆ ಹೋಗುವ ಸಂಭವವಿರುವುದರಿಂದ ಸಮಾಪನೆಗೊಳಿಸುವುದೇ ಸೂಕ್ತವೆಂದು ಕಂಡುಬಂದಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮತ್ತು 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(2)ರನ್ವಯ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಂಎಲ್/2008, ಬೆಂಗಳೂರು ದಿನಾಂಕ:27–05–2010ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್, ಆದ ನಾನು ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಸ್ಥಗಿತಗೊಂಡಿರುವ ಗೌರಪುರ ಹಾಲು ಉತ್ಪಾದಕರ ಸಹಕಾರ ಸಂಘ ನಿ., ಗೌರಾಪುರ, ಚನ್ನಗಿರಿ–ತಾ: ಇದನ್ನು ಸಮಾಪನೆಗೊಳಿಸಿ, 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1)ರನ್ವಯ ಸಹಕಾರ ಅಭಿವೃದ್ಧಿ ಅಧಿಕಾರಿ, ಚನ್ನಗಿರಿ ಇವರನ್ನು ಸಂಘದ ಸಮಾಪನಾಧಿಕಾರಿಯನ್ನಾಗಿ ಅಧಿಕ ಪ್ರಭಾರದಲ್ಲಿ

ನೇಮಿಸಿರುತ್ತೇನೆ. ಸಮಾಪನಾಧಿಕಾರಿಯು ಸಂಘದ ವಿಶಿಷ್ಟ ಪ್ರಭಾರವನ್ನು ಮತ್ತು ಸಂಘದ ಆಸ್ತಿಗಳನ್ನು ಸಂಘದ ಕಾರ್ಯದರ್ಶಿ ಅಥವಾ ಸಂಘದ ಪ್ರಭಾರ ಹೊಂದಿದ ಯಾವುದೇ ವ್ಯಕ್ತಿಯಿಂದ 1959ನೇ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 73(1) ಮತ್ತು 74ರ ನಿಯಮದ ಪ್ರಕಾರ ಪಡೆದುಕೊಳ್ಳತಕ್ಕದ್ದು.

ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:29–11–2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.

ಪಿಆರ್–1682 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ:ಡಿಟಿಸಿಆರ್:500/2009–10, ದಿನಾಂಕ:19ನೇ ಆಗಸ್ಟ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,

ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು,<br>ನಂಜನಗೂಡು ವಲಯ, ನಂಜನಗೂಡು. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ಗ್ರಾಮ ಪಂಚಾಯಿತಿ ಚುನಾವಣೆ–2010ರ ಹಿನ್ನಲೆಯಲ್ಲಿ ಗಸ್ತು ನಿರತ ಸಮಯದಲ್ಲಿ ದಿನಾಂಕ:05–05–10ರಂದು ರಾತ್ರಿ 9.00 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು ತಾಲ್ಲೂಕಿನ ಹುಲ್ಲಹಳ್ಳಿ ಹೋಬಳಿ, ಹರತಲೆ ಗ್ರಾಮದ ಹತ್ತಿರ ಕೆಎ–09/ಇಸಿ–319 ನೋಂದಣಿ ಸಂಖ್ಯೆಯ ಟಿ.ವಿ.ಎಸ್ ಮೊಪೆಡ್ ವಾಹನದಲ್ಲಿ ಅಕ್ರಮವಾಗಿ 10.800 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು ಆರೋಪಿ ಪರಾರಿಯಾಗಿರುತ್ತಾನೆಂದು ಪ್ರಕರಣ ಸಂ: 21/2009–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 ಮತ್ತು 32, 38(ಎ) ಮತ್ತು 43ರ ರೀತ್ಯಾ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ಕ್ರಮಕ್ಕಾಗಿ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾದಕ ದ್ರವ್ಯಗಳ ಪೈಕಿ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವರದಿ ಪಡೆಯಲಾಗಿ, ಮದ್ಯದ ಬಾಟಲಿಗಳಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಇವು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆಂದು ದಿನಾಂಕ:26–06–10ರ ಪತ್ರದಲ್ಲಿ ವರದಿ ನೀಡಿರುತ್ತಾರೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರ ದಿನಾಂಕ:01–07–2010ರಲ್ಲಿ ವರದಿಯೊಂದನ್ನು ಸಲ್ಲಿಸಿ, ಜಪ್ತುಪಡಿಸಲಾದ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಸಂಬಂಧಪಟ್ಟ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆಯಲಾಗಿದ್ದು, ಸದರಿ ಬಿ ವಹಿಯ ಪ್ರತಿಯಂತೆ ಶ್ರೀ ವೇಲುಸ್ವಾಮಿ ಬಿನ್ ಶ್ರೀ ವೀರರಾಜು, ಸಂ. 40/1, 2ನೇ ಕ್ರಾಸ್, ಅಶೋಕಪುರಂ, ನಂಜನಗೂಡು ಟೌನ್ ಇವರ ಒಡೆತನದಲ್ಲಿರುತ್ತದೆ. ಸದರಿ ವ್ಯಕ್ತಿಯ ವಿಳಾಸವನ್ನು ಅನೇಕ ಬಾರಿ ಪತ್ತೆಹಚ್ಚಲು ಪ್ರಯತ್ನಿಸಿದರೂ ಸಹ ವಾಹನ ಮಾಲೀಕರು ಪತ್ತೆಯಾಗಿರುವುದಿಲ್ಲ ಹಾಗೂ ವಾಹನವು ತನ್ನದೆಂದು ಇದೂವರೆವಿಗೂ ಮಾಲೀಕತ್ವ ನಿರೂಪಿಸಲು ಯಾರೊಬ್ಬರೂ ಮುಂದೆ ಬಂದಿರುವುದಿಲ್ಲ. ಆದ ಕಾರಣ ಕರ್ನಾಟಕ ಅಬಕಾರಿ ಕಾಯ್ದೆಯಡಿ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ. ಈ ಬಗ್ಗೆ ಮೈಸೂರು ಉಪ ವಿಭಾಗದ ಅಬಕಾರಿ ಉಪ ಅಧೀಕ್ಷಕರು ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು, ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳು, ವಾಹನ ಮತ್ತು ಇತ್ಯಾದಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:05–05–2010ರಂದು ನಂಜನಗೂಡು ತಾಲ್ಲೂಕಿನ ಹುಲ್ಲಹಳ್ಳಿ ಹೋಬಳಿ, ಹರತಲೆ ಗ್ರಾಮದ ಹತ್ತಿರ ಕೆಎ–09/ಇಸಿ–319 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಮೊಪೆಡ್ ವಾಹನದಲ್ಲಿ ಅಕ್ರಮವಾಗಿ 10.800 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/500/2009-10, ದಿನಾಂಕ:19-08-2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:21/09-10, ದಿನಾಂಕ:05-05-2010ರಂದು ವಶಪಡಿಸಿಕೊಂಡ ಕೆಎ-09/ಇಸಿ-319 ನೋಂದಣಿ ಸಂಖ್ಯೆಯ ಟಿ.ವಿ.ಎಸ್. ಮೊಪೆಡ್ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಆಗಸ್ಟ್ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿಆರ್-1683

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ:ಡಿಟಿಸಿಆರ್:215 (ಪೋಲೀಸ್)/2009-10, ದಿನಾಂಕ:19ನೇ ಆಗಸ್ಟ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು

**ಪಿರ್ಯಾದುದಾರರು** — **ವಿರುದ್ಧ** — **ಪ್ರತಿವಾದಿ / ಆರೋಪಿ**

ಆರಕ್ಷಕ ಉಪ ನಿರೀಕ್ಷಕರು,
ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಜಿಲ್ಲೆ.

ಚಂದ್ರ ಬಿನ್ ಮಹದೇವು

**ಪ್ರಕರಣದ ಮುಖ್ಯಾಂಶಗಳು:**

ಗ್ರಾಮ ಪಂಚಾಯಿತಿ ಚುನಾವಣೆ-2010ರ ಪಾನ ನಿರೋಧಿ ದಿನದ ಹಿನ್ನೆಲೆಯಲ್ಲಿ ದಿನಾಂಕ:11-05-2010ರಂದು ರಾತ್ರಿ 8-30 ಗಂಟೆ ಸಮಯದಲ್ಲಿ ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ವಿಭಾಗ, ಮೈಸೂರು ಜಿಲ್ಲೆ ಇವರು ಮೈಸೂರು ತಾ॥, ಬಂಡಿಪಾಳ್ಯ ಗ್ರಾಮದ ಚೆಕ್‌ಪೋಸ್ಟ್ ಹತ್ತಿರ **ಕೆಎ-09/ಡಬ್ಲ್ಯೂ-5641** ನೋಂದಣಿ ಸಂಖ್ಯೆಯ **ಟಿ.ವಿ.ಎಸ್. ಎಕ್ಸೆಲ್ ಮೊಪಡ್** ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದು, ಅಧಿಕಾರಿಗಳನ್ನು ಕಂಡು ಆರೋಪಿ ವಾಹನ ಮತ್ತು ಮದ್ಯವನ್ನು ಸ್ಥಳದಲ್ಲೇ ಬಿಟ್ಟು ಪರಾರಿಯಾಗಿದ್ದು, ಈ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ಜಪ್ತುಗೊಳಿಸಿ, ಆರೋಪಿ ಪರಾರಿಯಾಗಿರುವುದಾಗಿ ಠಾಣಾ ಮೊಕದ್ದಮೆ ಸಂ:30/2010ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 32, 34ರ ರೀತ್ಯಾ ಮೊಕದ್ದಮೆ ದಾಖಲಿಸಿ, ಜಪ್ತುಪಡಿಸಲಾದ ವಾಹನ ಮತ್ತು ಮದ್ಯವನ್ನು ಅಬಕಾರಿ ಇಲಾಖೆಗೆ ಹಸ್ತಾಂತರಿಸಲು ದಿ:12-5-2010ರಂದು ಈ ಪ್ರಾಧಿಕಾರದ ಅನುಮತಿಗಾಗಿ ಕೋರಿರುತ್ತಾರೆ. ಅಂತೆಯೇ ದಿನಾಂಕ:19-05-2010ರಂದು ಮೈಸೂರು ವಲಯ-4ರ ಅಬಕಾರಿ ನಿರೀಕ್ಷಕರಿಗೆ ಹಸ್ತಾಂತರಿಸಲು ಅನುಮತಿ ನೀಡಲಾಗಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿ:11-5-2010ರಂದು ಮೈಸೂರು ತಾ॥, ಬಂಡಿಪಾಳ್ಯ ಗ್ರಾಮದ ಚೆಕ್‌ಪೋಸ್ಟ್ ಹತ್ತಿರ **ಕೆಎ-09/ಡಬ್ಲ್ಯೂ-5641** ನೋಂದಣಿ ಸಂಖ್ಯೆಯ **ಟಿ.ವಿ.ಎಸ್. ಎಕ್ಸೆಲ್ ಮೊಪಡ್** ವಾಹನದಲ್ಲಿ ಅಕ್ರಮವಾಗಿ 8.640 ಲೀ. ಮದ್ಯವನ್ನು ಹೊಂದಿ ಸಾಗಾಣಿಕೆ ಮಾಡುತ್ತಿದ್ದು ಕಂಡುಬಂದಿರುತ್ತದೆ. ಆರೋಪಿಯು ಪರಾರಿಯಾಗಿರುತ್ತಾರೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಯಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು, ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳು, ವಾಹನ ಮತ್ತು ಇತ್ಯಾದಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/215 (ಪೋಲೀಸ್)/2009-10, ದಿನಾಂಕ:19-08-2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಆರಕ್ಷಕ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ಮೈಸೂರು ಜಿಲ್ಲೆ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:30/2010, ದಿನಾಂಕ:11-05-2010 ರಂದು

ವಶಪಡಿಸಿಕೊಂಡ **ಕೆಎ–09/ಡಬ್ಲ್ಯೂ–5641** ನೋಂದಣಿ ಸಂಖ್ಯೆಯ **ಟಿ.ವಿ.ಎಸ್. ಎಕ್ಸೆಲ್ ಮೊಪಡ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಆಗಸ್ಟ್ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–1684

**ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು ಇವರ ನ್ಯಾಯಾಲಯ**
**ಸಂಖ್ಯೆ:ಡಿಟಿಸಿಆರ್:563/2009–10, ದಿನಾಂಕ:19ನೇ ಆಗಸ್ಟ್, 2010**

**ಉಪಸ್ಥಿತರು:** ಡಾ॥ ವೈ. ಮಂಜುನಾಥ್,
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಹಾಗೂ ಅಧಿಕೃತ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು

| **ಪಿರ್ಯಾದುದಾರರು** | **ವಿರುದ್ಧ** | **ಪ್ರತಿವಾದಿ / ಆರೋಪಿ** |
|---|---|---|
| ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ, ನಂಜನಗೂಡು. | | ಆರೋಪಿ ಪರಾರಿ |

**ಪ್ರಕರಣದ ಮುಖ್ಯಾಂಶಗಳು:**

ಗ್ರಾಮ ಪಂಚಾಯಿತಿ ಚುನಾವಣೆ–2010ರ ಹಿನ್ನಲೆಯಲ್ಲಿ ದಿನಾಂಕ:11–05–10ರಂದು ರಾತ್ರಿ 8.00 ಗಂಟೆಯ ಸಮಯದಲ್ಲಿ ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ನಂಜನಗೂಡು ತಾಲ್ಲೂಕಿನ ಕಲ್ಲಹಳ್ಳಿ ಗ್ರಾಮದ ಉತ್ತರ ಭಾಗಕ್ಕೆ ಸೇರಿದ ಕಬಿನಿ ನದಿಯ ದಡದ ಪಕ್ಕದಲ್ಲಿ ಕೆಎ–03/ಇಜೆ–6389 ನೋಂದಣಿ ಸಂಖ್ಯೆಯ ಟಿ.ವಿ.ಎಸ್ ವಿಕ್ಟರ್ ವಾಹನದಲ್ಲಿ ಪಾನ ನಿರೋಧಿ ದಿನವಿದ್ದರೂ ಸಹ ಅಕ್ರಮವಾಗಿ 3,600 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದ ಆರೋಪಕ್ಕಾಗಿ ವಾಹನ ಮತ್ತು ಮದ್ಯವನ್ನು ವಶಪಡಿಸಿಕೊಂಡು ಆರೋಪಿ ಪರಾರಿಯಾಗಿರುತ್ತಾನೆಂದು ಪ್ರಕರಣ ಸಂ: 24/09–10ರಲ್ಲಿ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 14 ಮತ್ತು 32, 38(ಎ) ಮತ್ತು 43ರ ರೀತ್ಯಾ ಮೊಕದ್ದಮೆಯನ್ನು ದಾಖಲಿಸಿ, ಮುಂದಿನ ಕ್ರಮಕ್ಕಾಗಿ ದಾಖಲಾತಿಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾದಕ ದ್ರವ್ಯಗಳ ಪೈಕಿ ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ವರದಿ ಪಡೆಯಲಾಗಿ, ಮದ್ಯದ ಬಾಟಲಿಗಳಲ್ಲಿ ಈಥೈಲ್ ಆಲ್ಕೋಹಾಲ್ ಅಂಶ ಕಂಡುಬಂದಿದ್ದು, ಇವು ಮಾನವನ ಸೇವನೆಗೆ ಯೋಗ್ಯವಾಗಿರುತ್ತದೆಂದು ದಿನಾಂಕ:26–06–10ರ ಪತ್ರದಲ್ಲಿ ವರದಿ ನೀಡಿರುತ್ತಾರೆ.

ನಂಜನಗೂಡು ವಲಯದ ಅಬಕಾರಿ ನಿರೀಕ್ಷಕರ ದಿನಾಂಕ:29–07–10ರಂದು ವರದಿಯನ್ನು ಸಲ್ಲಿಸಿ, ಜಪ್ತುಪಡಿಸಲಾದ ವಾಹನದ ಮಾಲೀಕತ್ವದ ವಿವರವುಳ್ಳ 'ಬಿ' ವಹಿಯ ಪ್ರತಿಯನ್ನು ಪಡೆಯಲಾಗಿದ್ದು, ಅದರಂತೆ ವಾಹನವು ಸೈಯದ್ ವಾಹೀದ್ ಅಹಮದ್ ಬಿನ್ ಸೈಯದ್ ಸೈದ್ ಅಹಮದ್, ಸಂ.1518, ಸೋನಪ್ಪ ಗ್ರೌಂಡ್, ಡಿ.ಜಿ. ಹಳ್ಳಿ, ಬೆಂಗಳೂರು ಇವರ ಒಡೆತನದಲ್ಲಿರುತ್ತದೆ. ಸದರಿ ವಿಳಾಸಕ್ಕೆ ತೆರಳಿ ಭೇಟಿ ನೀಡಿ ಮಾಲೀಕರನ್ನು ವಿಚಾರಣೆ ಮಾಡಲಾಗಿ ಮಹದೇವಸ್ವಾಮಿ ಬಿನ್ ಕಾಳಿಂಗಪ್ಪ, ರಾಂಪುರ ಗ್ರಾಮ, ಹುಲ್ಲಹಳ್ಳಿ ಗ್ರಾಮ, ನಂಜನಗೂಡು ತಾ॥ ಇವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ಈ ವಿಳಾಸಕ್ಕೆ ದಿನಾಂಕ: 12–07–10 ಮತ್ತು 18–07–10ರಂದು ಭೇಟಿ ನೀಡಿ, ವಿಚಾರಣೆ ಮಾಡಲಾಗಿ, ಈ ಹೆಸರಿನ ವ್ಯಕ್ತಿಯು ವಿಳಾಸದಲ್ಲಿ ಇಲ್ಲವೆಂದು ಗ್ರಾಮಸ್ಥರಿಂದ ತಿಳಿದುಬಂದಿರುತ್ತದೆಂದು ತಿಳಿಸುತ್ತಾ, ಈ ಪ್ರಕರಣದಲ್ಲಿ ಸಿ ಅಂತಿಮ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಲು ಅನುಮತಿಗಾಗಿ ಕೋರಿರುತ್ತಾರೆ.

ಈ ಪ್ರಕರಣದಲ್ಲಿ ಆರೋಪಿಯು ಪರಾರಿಯಾಗಿದ್ದು, ಇಂತಹ ಮೊಕದ್ದಮೆಗಳಲ್ಲಿ ಪ್ರಕರಣ ದಾಖಲಾದ ಒಂದು ತಿಂಗಳೊಳಗಾಗಿ ವಾಹನದ ಮಾಲೀಕತ್ವವನ್ನು ನಿರೂಪಿಸಲು ಈ ಪ್ರಾಧಿಕಾರದ ಮುಂದೆ ಹಾಜರಾಗದಿದ್ದಲ್ಲಿ ಅಂತಹ ಅಬಕಾರಿ ವಸ್ತುಗಳು, ವಾಹನ ಮತ್ತು ಇತ್ಯಾದಿ ವಸ್ತುಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ)ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕಾನೂನಿನಲ್ಲಿ ಅವಕಾಶವಿರುತ್ತದೆ.

ಲಭ್ಯವಿರುವ ದಾಖಲೆಗಳಂತೆ, ದಿನಾಂಕ:11–05–2010ರಂದು ನಂಜನಗೂಡು ತಾಲ್ಲೂಕಿನ ಕಲ್ಲಹಳ್ಳಿ ಗ್ರಾಮದ ಉತ್ತರ ಭಾಗಕ್ಕೆ ಸೇರಿದ ಕಬಿನಿ ನದಿಯ ದಡದ ಪಕ್ಕ ಕೆಎ–03/ಇಜೆ–6389 ನೋಂದಣಿ ಸಂಖ್ಯೆಯ ಟಿ.ವಿ.ಎಸ್ ವಿಕ್ಟರ್ ವಾಹನದಲ್ಲಿ ಅಕ್ರಮವಾಗಿ 3,600 ಲೀ. ಮದ್ಯವನ್ನು ಹೊಂದಿ, ಸಾಗಾಣಿಕೆ ಮಾಡುತ್ತಿದ್ದುದು ಕಂಡುಬಂದಿರುತ್ತದೆ. ಇದನ್ನು ಸೂಕ್ಷ್ಮವಾಗಿ ಗಮನಿಸಿದಾಗ, ಕಲಂ 32, 38(ಎ)ರ ಅಡಿಯಲ್ಲಿ ತನಿಖಾಧಿಕಾರಿಗಳು ಆರೋಪ ಮಾಡಿದ್ದು, ಈ ಬಗ್ಗೆ ಪ್ರತಿವಾದಿಯು ತನ್ನ ಮೇಲೆ ಇರತಕ್ಕಂತಹ ಜವಾಬ್ದಾರಿಯನ್ನು ಈ ಪ್ರಾಧಿಕಾರದ ಮುಂದೆ ಹಾಜರಾಗಿ ನಿರೂಪಿಸಿರುವುದಿಲ್ಲ ಹಾಗೂ ವಾಹನ ಬಿಡುಗಡೆಗಾಗಿ ಪ್ರತಿವಾದಿಗಳ ಕಡೆಯಿಂದ ಯಾವುದೇ ಪ್ರಯತ್ನ ನಡೆಸಿರುವುದಿಲ್ಲ.

ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (3) ತಿಂಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ, ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರೂ ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಇವರು ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಅಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನ ಮಾಲೀಕರಿಗೆ/ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮೀಲಾಗದೆ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿಲ್ಲವಾದ್ದರಿಂದ ಸದರಿ ವಾಹನವನ್ನು ಇನ್ನೂ ಹಾಗೇ ಇಟ್ಟುಕೊಂಡಲ್ಲಿ ಯಾವುದೇ ಪ್ರಯೋಜನ

ಇರದಿರುವುದನ್ನು ಮನಗಂಡು ಅದನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/563/2009–10, ದಿನಾಂಕ:19–08–2010**

ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಸಿ)ರನ್ವಯ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ, ಅಬಕಾರಿ ನಿರೀಕ್ಷಕರು, ನಂಜನಗೂಡು ವಲಯ ಇವರು ಹೂಡಲಾದ ಪ್ರ.ಮಾ.ವರದಿ ಸಂಖ್ಯೆ:24/09–10, ದಿನಾಂಕ:11–05–2010ರಂದು ವಶಪಡಿಸಿಕೊಂಡ **ಕೆಎ–03/ಇಜೆ–6389** ನೋಂದಣಿ ಸಂಖ್ಯೆಯ **ಟಿ.ವಿ.ಎಸ್. ವಿಕ್ಟರ್** ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿದೆ.

(ಈ ಆದೇಶವನ್ನು ಇಂದು ಅಂದರೆ 2010ನೇ ಇಸವಿ ಆಗಸ್ಟ್ ತಿಂಗಳ 19ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತಲೇಖನ ನೀಡಿ, ನಂತರ ಗಣಕೀಕೃತಗೊಳಿಸಿ, ತಪ್ಪುಗಳನ್ನು ತಿದ್ದಿ, ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.)

**ಡಾ॥ ವೈ.ಮಂಜುನಾಥ್,**
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಹಾಗೂ ಅಧಿಕೃತ ಅಧಿಕಾರಿಗಳು,
ಮೈಸೂರು ಜಿಲ್ಲೆ, ಮೈಸೂರು.

ಪಿಆರ್–1685

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಾರ್ಯಾಲಯ**

**ವಿಷಯ:** ಸಮಾಪನೆಗೊಂಡಿರುವ ಕುಂತಪಾಲನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕುಂತಪಾಲನಳ್ಳಿ, ದಾವಣಗೆರೆ ತಾಲ್ಲೂಕು ಇದನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72(3)ರನ್ವಯ ಪುನ:ಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:**
1) ಈ ಕಛೇರಿಯ ಆದೇಶ ಸಂಖ್ಯೆ:ಡಿಆರ್/ಡಿವಿಜಿ/ಸಮಾಪನೆ/ಸಿಆರ್–25/2008–09, ದಿ:20–07–2009 ಮತ್ತು 13–08–2010.
2) ಹಿಂದಿನ ಆಡಳಿತ ಮಂಡಳಿ ನಿರ್ದೇಶಕರು ಮತ್ತು ಅಧ್ಯಕ್ಷರು ಸೇರಿ ದಿನಾಂಕ 25–10–2010ರಂದು ನಡೆಸಿದ ಸಭಾ ನಡವಳಿಗಳು
3) ಡೆಪ್ಯೂಟಿ ಮ್ಯಾನೇಜರ್ ಶಿಮೂಲ್ ದಾವಣಗೆರೆ ಡಿವಿಜನ್‌ರವರ ಪತ್ರ ಸಂಖ್ಯೆ ಶಿ.ಹಾ.ಒ/ಸೇ.ಮಾ.ತಂ./ದಾ.ವಿ./ ಪುನ:ಶ್ಚೇತನ/ 23/2010–11, ದಿನಾಂಕ 04–11–2010.
4) ಸಮಾಪನಾಧಿಕಾರಿಗಳ ಪ್ರಸ್ತಾವನೆ ಪತ್ರ ಸಂ:ಸಸಂಹಿನಿ/ಹಾ.ಉ.ಸ.ಸಂ.ನಿ.ಕೆ.ಪಿ.ಹಳ್ಳಿ/ಸಮಾಪನೆ/2010–11, ದಿನಾಂಕ:04–11–2010
5) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರ ಪತ್ರ ಸಂ:ಸನಿ31/ ಸಮಾಪನೆ/ಹಾ.ಉ.ಸ.ಸಂ.ನಿ.ಕೆ.ಪಿ.ಹಳ್ಳಿ/ಸಿಆರ್– /2008–09, ದಿನಾಂಕ:08–11–2010

**ಪ್ರಸ್ತಾವನೆ:**

ಪ್ರಸ್ತುತ ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ, ವಿಷಯ ಸೂಚಿತ ಸಂಘವು ಕಳೆದ ಹಲವಾರು ವರ್ಷಗಳಿಂದ ಸ್ಥಗಿತಗೊಂಡಿದ್ದ ಕಾರಣ ಉಲ್ಲೇಖ (1)ರ ಆದೇಶದ ರೀತ್ಯಾ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು 2ನೇ ವೃತ್ತ, ದಾವಣಗೆರೆ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಸದರಿ ಸಂಘದ ಕಾರ್ಯಚಟುವಟಿಕೆಗಳನ್ನು ಪೂರ್ಣಗೊಳಿಸುವ ಪೂರ್ವದಲ್ಲಿ ಪುನ:ಶ್ಚೇತನಗೊಳಿಸುವ ಬಗ್ಗೆ ಉಲ್ಲೇಖ (2) & (3)ರಲ್ಲಿ ವಿನಂತಿಸಿಕೊಂಡಿರುವುದರಿಂದ ಉಲ್ಲೇಖ (4)ರಲ್ಲಿ ಪುನ:ಶ್ಚೇತನಗೊಳಿಸಲು ಪ್ರಸ್ತಾವನೆಯನ್ನು ಸಲ್ಲಿಸಿರುವುದರಿಂದ ಉಲ್ಲೇಖ (5) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಉಪ ವಿಭಾಗ ದಾವಣಗೆರೆ ಇವರು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಸಂಘದ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಸಂಘದ ಆಡಳಿತ ಮಂಡಳಿ ರಚಿಸಿಕೊಂಡು ಮುಂದುವರೆಸಿಕೊಂಡು ಹೋಗಲು ಅವಕಾಶ ಕಲ್ಪಿಸುವಂತೆ ಶಿಫಾರಸ್ಸಿನೊಂದಿಗೆ ಪ್ರಸ್ತಾವನೆಯನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಪರಿಶೀಲಿಸಿ ಸಂಘವನ್ನು ಪುನ:ಶ್ಚೇತನಗೊಳಿಸಲು ಈ ಕೆಳಕಂಡ ಷರತ್ತುಗಳನ್ನು ವಿಧಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**"ಆದೇಶ"**

**ನಂ. ಡಿಆರ್/ಡಿವಿಜಿ/ಹಾ.ಉ.ಸ.ಸಂ.ನಿ.ಕೆ.ಪಿ.ಹಳ್ಳಿ/ಪುನ:ಶ್ಚೇತನ/ಸಿಆರ್–25/2008–09, ದಿನಾಂಕ:22–11–2010**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(3) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ ಸಿಎಲ್ಎಂ/2008, ಬೆಂಗಳೂರು ದಿನಾಂಕ:27–05–2010 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಿ. ಕುಬೇರಪ್ಪ, ಕೆ.ಸಿ.ಎಸ್. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಆದ ನಾನು ಸಮಾಪನೆಗೊಂಡಿರುವ ಕುಂತಪಾಲನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕುಂತಪಾಲನಹಳ್ಳಿ, ದಾವಣಗೆರೆ ತಾಲ್ಲೂಕು ಇದನ್ನು ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಗೊಳಿಸಿ ಈ ಸಂಘವನ್ನು ಮುಂದುವರಿಸಿ ಕೊಂಡು ಹೋಗಲು ಅವಕಾಶ ನೀಡುತ್ತಾ ಈ ಮೂಲಕ ಸಂಘವನ್ನು ಈ ಕೆಳಕಂಡ ಷರತ್ತುಗೊಳಪಡಿಸಿ ಪುನ:ಶ್ಚೇತನಕ್ಕಾಗಿ ಆದೇಶಿಸಿರುತ್ತೇನೆ.

**–: ಷರತ್ತುಗಳು :–**

1) ಸಂಘದ ಉಪ ನಿಯಮಗಳ ಉದ್ದೇಶಗಳ ರೀತ್ಯಾ ಕಾರ್ಯತತ್ಪರವಾಗತಕ್ಕದ್ದು.
2) ಈಗ ನೀಡಿರುವ ಕ್ರಿಯಾ ಯೋಜನೆ ಪ್ರಕಾರ ಪ್ರಗತಿ ಸಾಧಿಸಿ ಪ್ರಗತಿ ವರದಿಯನ್ನು ತಪ್ಪದೇ ಸಲ್ಲಿಸತಕ್ಕದ್ದು.

3) ಪ್ರತಿ ಮಾಹೆ ಜಮಾ-ಖರ್ಚು, ಆಡಳಿತ ಮಂಡಳಿ ನಿರ್ಣಯದ ಪ್ರತಿಗಳನ್ನು ತಪ್ಪದೇ ಸಕ್ಷಮ ಪ್ರಾಧಿಕಾರಕ್ಕೆ ಸಲ್ಲಿಸಿ ಸ್ವೀಕೃತಿ ಕಾಯ್ದಿರಿಸತಕ್ಕದ್ದು.

4) ಕ್ರಿಯಾ ಯೋಜನೆ ಪ್ರಕಾರ ಪ್ರಗತಿ ಸಾಧಿಸದಿದ್ದಲ್ಲಿ ಪುನ: ಯಾವುದೇ ಮುನ್ಸೂಚನೆ ನೀಡದೆ ಸಮಾಪನೆಗೊಳಿಸಲು ಕ್ರಮವಿಡಲಾಗುವುದು.

5) ಪುನ:ಶ್ಚೇತನ ಆದೇಶ ಹೊರಡಿಸಿದ 6 ತಿಂಗಳ ಒಳಗಾಗಿ ಲೆಕ್ಕಪರಿಶೋಧನೆ ಮಾಡಿಸಿ ಸದರಿ ವರದಿಯನ್ನು ಕಚೇರಿಗೆ ಸಲ್ಲಿಸುವುದು.

6) ಡಿ.ಡಿ.ಸಿ.ಸಿ. ಬ್ಯಾಂಕ್‌ನೊಂದಿಗೆ ವ್ಯವಹಾರ ಮಾಡತಕ್ಕದ್ದು.

ಪುನ:ಶ್ಚೇತನಗೊಂಡ ಈ ಸಂಘದ ಮಹಾಸಭೆಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಪ್ರಕಾರ ಜರುಗಿಸಲು ಸಂಘದ ಸಮಾಪನಾಧಿಕಾರಿಗೆ ಸೂಚಿಸಿದೆ. ಹಾಗೂ ನೂತನ ಆಡಳಿತ ಮಂಡಳಿಯನ್ನು ರಚಿಸಲು ಶ್ರೀ ಟಿ. ಚನ್ನಬಸಪ್ಪ, ಸಹಕಾರ ಸಂಘಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಚೇರಿ, ಹರಪನಹಳ್ಳಿ ಇವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಿರುತ್ತೇನೆ. ಚುನಾವಣಾಧಿಕಾರಿಗಳು, ಚುನಾವಣಾ ಕಾರ್ಯವನ್ನು ಜರುಗಿಸಿ ಹಾಗೂ ಮಹಾಸಭೆಯಲ್ಲಿ ಹಾಜರಾಗಿ ಈ ಕಛೇರಿಗೆ ವರದಿ ಮಾಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮೊಹರಿನೊಂದಿಗೆ ದಿನಾಂಕ:22-11-2010ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು.

ಪಿಆರ್-1666 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಾರ್ಯಾಲಯ, ದಾವಣಗೆರೆ ಉಪವಿಭಾಗ, ದಾವಣಗೆರೆ**

**ಸಂಖ್ಯೆ: ಆರ್.31/ದಾವಾ/ಅಮಲ್ಜಾರಿ/ಇ.ಪಿ.191/2008-09, ದಿನಾಂಕ:26ನೇ ನವೆಂಬರ್, 2010**

**ವಿಷಯ:** ದಿ ದಾವಣಗೆರೆ ಅರ್ಬನ್ ಕೋ-ಆಪ್ ಬ್ಯಾಂಕ್ ಲಿ., ದಾವಣಗೆರೆ, ಇದರ ಸುಸ್ತಿ ಸಾಲಗಾರರಾದ ಶ್ರೀಮತಿ ಎಸ್. ಸುನಂದ ಕೋಂ. ಎಸ್.ಎಲ್.ಸ್ವಾಮಿ, ಡೋರ್ ನಂ.2132/l, 4ನೇ ಮೇನ್, ಎಂ.ಸಿ.ಸಿ.ಎ ಬ್ಲಾಕ್, ದಾವಣಗೆರೆ, ಇವರ ಸ್ಥಿರಾಸ್ತಿ ಮಾರಾಟವನ್ನು ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ನಿ.441 ಇವರ ಪ್ರಸ್ತಾವನೆಯ ದಿನಾಂಕ:15-04-2010 ಮತ್ತು 15-11-2010

2) ಈ ಕಛೇರಿಯ ಸಮ ಸಂಖ್ಯೆಯ ಅಂತಿಮ ತಿಳುವಳಿಕೆಯ ಪತ್ರದ ದಿನಾಂಕ:27-05-2010

**ಪ್ರಸ್ತಾವನೆ:**

ದಿ ದಾವಣಗೆರೆ ಅರ್ಬನ್ ಕೋ-ಆಪ್ ಬ್ಯಾಂಕ್ ಲಿ., ದಾವಣಗೆರೆ, ಇದರಲ್ಲಿ ಸಾಲ ಪಡೆದ ಸುಸ್ತಿದಾರರಾದ ಶ್ರೀಮತಿ ಎಸ್. ಸುನಂದ ಕೋಂ. ಎಸ್.ಎಲ್. ಸ್ವಾಮಿ, ಇವರಿಗೆ ಸೇರಿದ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ, 5ನೇ ವಾರ್ಡ್, 9ನೇ ಬಿ ಡಿವಿಜನ್, ನಿವೇಶನ ಸಂಖ್ಯೆ.153, ಡೋರ್ ನಂ.2132/l, 4ನೇ ಮುಖ್ಯ ರಸ್ತೆ, ಎಂ.ಸಿ.ಸಿ. ಎ ಬ್ಲಾಕ್, ಇದರ ಅಳತೆ ಪೂರ್ವ-ಪಶ್ಚಿಮ 60 ಅಡಿ, ಉತ್ತರ-ದಕ್ಷಿಣ 26 ಅಡಿ, ನಿವೇಶನದಲ್ಲಿ ಕಟ್ಟಿರುವ ಆರ್.ಸಿ.ಸಿ. ಹೊದಿಕೆಯುಳ್ಳ ವಾಸೋಪಯೋಗಿ ಮನೆ, ಮಾರಾಟಾಧಿಕಾರಿ, ನಿ.441, ದಾವಣಗೆರೆ ಅರ್ಬನ್ ಕೋ-ಆಪ್ ಬ್ಯಾಂಕ್ ಲಿ., ದಾವಣಗೆರೆ, ಇವರ ದಾವಾ ಸಂಖ್ಯೆ ಜೆ.ಆರ್/ಡಿವಿಜಿ/ದಾವಾ/320/2008-2009, ದಿನಾಂಕ 30-12-2008ರ ಮತ್ತು ಇ.ಪಿ. ನಂ. 191/2008-09 ರಡಿಯಲ್ಲಿ ಅಮಲ್ಜಾರಿ ಕ್ರಮ ಜರುಗಿಸಿ, ದಿನಾಂಕ 12-4-2010ರಂದು ಬಹಿರಂಗ ಹರಾಜು ನಡೆಸಿರುತ್ತಾರೆ. ಸದರಿ ಬಹಿರಂಗ ಹರಾಜಿನಲ್ಲಿ ಶ್ರೀ ಎಸ್. ಯತಿರಾಜ ಬಿನ್ ಶುಂಭುಲಿಂಗಪ್ಪ, ದಾವಣಗೆರೆ, ಇವರು ಅತಿ ಹೆಚ್ಚು ಬಿಡ್ಡುದಾರರಾಗಿ ರೂ. 3,66,000-00 (ರೂಪಾಯಿ ಮೂರು ಲಕ್ಷದ ಅರವತ್ತಾರು ಸಾವಿರ ಮಾತ್ರ) ಗಳಿಗೆ ಬಿಡ್ ಮಾಡಿರುವ ಕಾರಣ ಮಾರಾಟಾಧಿಕಾರಿಗಳು ಸದರಿಯವರ ಹೆಸರಿಗೆ ಹರಾಜನ್ನು ನಿಲ್ಲಿಸಿರುವುದರ ಸಂಬಂಧ, ಈ ದಾವಾ ಸ್ವತ್ತನ್ನು ಸಂಬಂಧಿಸಿದವರ ಹೆಸರಿಗೆ ಮಾರಾಟ ಮಾಡಿರುವ ಸಂಬಂಧ ಬ್ಯಾಂಕಿನ ಮಾರಾಟಾಧಿಕಾರಿಗಳ ಪತ್ರ ದಿನಾಂಕ 15-04-2010 ಮತ್ತು 15-11-2010ರ ಪ್ರಕಾರ ಸದರಿ ಷೆಡ್ಯೂಲ್ ಆಸ್ತಿ ಮಾರಾಟ ಸಂದರ್ಭದಲ್ಲಿ ಸಾಲಗಾರರು ಕೂಡ ಹಾಜರಾಗಿರುವ ಬಗ್ಗೆ ತಿಳಿಸಿರುತ್ತಾರೆ ಮತ್ತು ಸದರಿ ಸಾಲಗಾರರು ದಿನಾಂಕ 13-11-2010ರಂದು ಬ್ಯಾಂಕಿನ ಅಧ್ಯಕ್ಷರಿಗೆ ಹರಾಜು ಮಾಡಿದ ಮೊತ್ತಕ್ಕೆ ಒಪ್ಪಿಗೆ ಪತ್ರ ನೀಡಿರುವುದು ದೃಢಪಟ್ಟಿರುತ್ತದೆ. ಮಾರಾಟಾಧಿಕಾರಿಗಳ ಪ್ರಕಾರ ಸದರಿ ಸ್ಥಿರಾಸ್ತಿಯು ಹಾಲಿ ಹರಾಜಾದ ಮೊತ್ತಕ್ಕಿಂತ ಹೆಚ್ಚಿಗೆ ಬಿಡ್ಡು ಆಗುವುದಿಲ್ಲ ಎಂಬ ಅಭಿಪ್ರಾಯ ತಿಳಿಸಿರುತ್ತಾರೆ. ಪ್ರಧಾನ ವ್ಯವಸ್ಥಾಪಕರು ದಿನಾಂಕ 15-11-2010ರ ಪತ್ರದಲ್ಲಿ ತಿಳಿಸಿದಂತೆ ಹರಾಜು ಮಾಡಿರುವ ಸ್ಥಿರಾಸ್ತಿ ಎಸ್.ಆರ್. ದರದ ಪ್ರಕಾರ ಸರಿಯಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಮಾರಾಟಾಧಿಕಾರಿಗಳು ಷೆಡ್ಯೂಲ್ ಸ್ಥಿರಾಸ್ತಿಯನ್ನು ಸ್ಥಿರೀಕರಿಸಲು ನಿಯಮಾನುಸಾರ ಶಿಫಾರಸ್ಸು ಮಾಡಿರುತ್ತಾರೆ. ಉಲ್ಲೇಖ 2ರನ್ವಯ ಅಂತಿಮ ತಿಳುವಳಿಕೆ ನೋಟಿಸು ಜಾರಿ ಮಾಡಿದರೂ ಯಾವುದೇ ಆಕ್ಷೇಪಣೆಗಳು ಇದುವರೆಗೂ ಬಾರದೇ ಇರುವುದರಿಂದ, ಈ ಕೆಳಕಂಡಂತೆ ಆದೇಶ ಮಾಡಿದೆ.

**"ಆದೇಶ"**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಅನ್ವಯ, ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(6)(ಎ) ರಡಿಯಲ್ಲಿ ಮಾರಾಟಾಧಿಕಾರಿ ನಿ.441, ದಿ ದಾವಣಗೆರೆ ಅರ್ಬನ್ ಕೋ-ಆಪ್ ಬ್ಯಾಂಕ್ ಲಿ., ದಾವಣಗೆರೆ, ಇವರ ದಿನಾಂಕ:12-04-2010 ರಂದು ಬಹಿರಂಗ ಹರಾಜಿನಲ್ಲಿ ದಾವಣಗೆರೆ ವಾಸಿ (1) ಶ್ರೀಮತಿ ಎಸ್. ಸುನಂದ ಕೋಂ, ಎಸ್.ಎಲ್. ಸ್ವಾಮಿ, ದಾವಣಗೆರೆ ಇವರಿಗೆ ಸೇರಿದ ಸ್ಥಿರಾಸ್ತಿಯಾದ ದಾವಣಗೆರೆ ಸಿಟಿ, ಡೋರ್ ನಂ2132/l, ಸೈಟ್ ನಂ.153, 5ನೇ ವಾರ್ಡ್, 9ನೇ ಬಿ ಡಿವಿಜನ್, 4ನೇ ಮುಖ್ಯ ರಸ್ತೆ, ಎಂ.ಸಿ.ಸಿ. 'ಎ' ಬ್ಲಾಕ್‌ನಲ್ಲಿರುವ, ಪೂರ್ವ-ಪಶ್ಚಿಮ 60 ಅಡಿ, ಉತ್ತರ-ದಕ್ಷಿಣ 26 ಅಡಿ, ಇದರಲ್ಲಿ ಕಟ್ಟಿಸಿರುವ ಆರ್.ಸಿ.ಸಿ ವಾಸೋಪಯೋಗಿ ನಿವೇಶನ ಮತ್ತು ಮನೆಯನ್ನು ಶ್ರೀ ಎಸ್. ಯತಿರಾಜ್ ಬಿನ್ ಶುಂಭುಲಿಂಗಪ್ಪ, ಇವರಿಗೆ ರೂ.3,66,000-00 (ರೂಪಾಯಿ ಮೂರು ಲಕ್ಷದ ಅರವತ್ತಾರು ಸಾವಿರ ಮಾತ್ರ)ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿರುವುದನ್ನು ಸ್ಥಿರೀಕರಿಸಿ ಈ ಮೂಲಕ ಧೃಡೀಕರಿಸಿದೆ.

ಸೇಲ್ ಸರ್ಟಿಫಿಕೇಟನ್ನು ಜಾರಿ ಮಾಡುವ ಸಂಬಂಧವಾಗಿ, ಖರೀದಿದರಾರು ಹರಾಜಿನ ಮೊತ್ತಕ್ಕೆ ಅವಶ್ಯವಿರುವ ಸ್ಟಾಂಪ್ ಪೇಪರನ್ನು ಖರೀದಿಸಿ, ಈ ಆದೇಶ ತಲುಪಿದ 15 ದಿನಗಳೊಳಗಾಗಿ ಈ ಕೆಳಗೆ ಸಹಿ ಮಾಡಿರುವವರ ಸಮ್ಮುಖದಲ್ಲಿ ಹಾಜರುಪಡಿಸಲು ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:26–11–2010 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು.
ದಾವಣಗೆರೆ ಉಪವಿಭಾಗ, ದಾವಣಗೆರೆ.

ಪಿಆರ್–1667

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು–1, ಬೆಂಗಳೂರು ನಗರ ಜಿಲ್ಲೆರವರ ಕಛೇರಿ**

**ನಂ.146, 8ನೇ ಅಡ್ಡರಸ್ತೆ, 3ನೇ ಮುಖ್ಯರಸ್ತೆ, ಮಾರ್ಗೋಸಾ ರಸ್ತೆ, ಮಲ್ಲೇಶ್ವರಂ, ಬೆಂಗಳೂರು–03**

**ಕ್ರಮಾಂಕ: ಡಿಆರ್‌ಬಿ–1/ಸಮಾಪನೆ/06/2010–11, ದಿನಾಂಕ:23ನೇ ನವೆಂಬರ್, 2010**

**ವಿಷಯ:** ಸ್ಥಗಿತಗೊಂಡಿರುವ ಹಾಗೂ ನಿಷ್ಕ್ರಿಯಗೊಂಡ ಅಸ್ತಿತ್ವದಲ್ಲಿರದ ಸಹಕಾರ ಸಂಘಗಳನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಗಳನ್ನು ನೇಮಕಾತಿ ಮಾಡುವ ಬಗ್ಗೆ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರುರವರ, ಪತ್ರ ಕ್ರ.ಮ. ಸಂಖ್ಯೆ ಸನಿ44/ ಸಮಾಪನೆ/ 17, 18, 19, 20, 21, 22, 23 ಮತ್ತು 24/2007–08 ದಿನಾಂಕ:04–10–2007.

(2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, 1ನೇ ವಲಯ, ಬೆಂಗಳೂರು ಇವರ ಪತ್ರ ಸಂಖ್ಯೆ:ಸನಿ.44/ಸಮಾಪನೆ/ 53, 54, 55, 56, 58, 59, 60, 61/2007–08, ದಿನಾಂಕ:29–10–2010, 30–10–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ಇವರು ಉಲ್ಲೇಖಿತ ಪತ್ರಗಳಲ್ಲಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ಬೆಂಗಳೂರು ನಗರ ಜಿಲ್ಲೆ–1 ರವರ ಕಛೇರಿ ವ್ಯಾಪ್ತಿಯಲ್ಲಿ ಈ ಕೆಳಗೆ ಆದೇಶದಲ್ಲಿ ತಿಳಿಸಿರುವ ಸಹಕಾರ ಸಂಘಗಳು ಹಲವಾರು ವರ್ಷಗಳಿಂದ ಕಾರ್ಯನಿರ್ವಹಿಸದೆ ಸ್ಥಗಿತಗೊಂಡಿದ್ದು. ಈ ಸಂಘಗಳಿಗೆ, ಆಡಳಿತಾಧಿಕಾರಿಗಳನ್ನು ನೇಮಕಾತಿ ಮಾಡಿದ್ದು, ಸಂಘವು ಅಸ್ತಿತ್ವದಲ್ಲಿರದ ಕಾರಣದಿಂದ ಹಾಗೂ ಈ ಸಂಘಗಳ ಬಗ್ಗೆ ಹಿತಾಸಕ್ತಿಯುಳ್ಳ ಸದಸ್ಯರುಗಳಾಗಲೀ ಪದಾಧಿಕಾರಿಗಳಾಗಲೀ ಅಥವಾ ನೌಕರರಾಗಲೀ ಸಿಗದ ಕಾರಣಗಳಿಂದಾಗಿ ಆಡಳಿತಾಧಿಕಾರಿಗಳು ಸ್ವಯಂಪ್ರಭಾರ ವಹಿಸಿಕೊಂಡು ಈ ಸಂಘಗಳನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಗಳನ್ನು ನೇಮಕಾತಿ ಮಾಡಲು ವರದಿ ಮಾಡಿರುವುದಾಗಿ ತಮ್ಮ ಪ್ರಸ್ತಾವನೆಯಲ್ಲಿ ತಿಳಿಸಿರುತ್ತಾರೆ. ಈ ಸಂಘಗಳು ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಹಾಗೂ ಸಂಘದ ಚಟುವಟಿಕೆಗಳಾದ ವಾರ್ಷಿಕ ಮಹಾಸಭೆ, ಲೆಕ್ಕಪರಿಶೋಧನಾ ವರದಿ ಇತ್ಯಾದಿಗಳ ಬಗ್ಗೆ ಈ ಕಛೇರಿಗೂ ಸಹ ಹಲವಾರು ವರ್ಷಗಳಿಂದ ಯಾವುದೇ ಮಾಹಿತಿ ಸ್ವೀಕೃತವಾಗಿರುವುದಿಲ್ಲ. ಸ್ಥಗಿತಗೊಂಡು, ನಿಷ್ಕ್ರಿಯವಾಗಿರುವ ಇಂತಹ ಸಂಘಗಳನ್ನು ಹಾಗೆಯೇ ಮುಂದುವರಿಸಿಕೊಂಡು ಹೋಗುವುದರಿಂದ ಸಾರ್ವಜನಿಕರಿಗಾಗಲೀ ಸಂಘದ ಸದಸ್ಯರುಗಳಿಗಾಗಲೀ ಯಾವುದೇ ಪ್ರಯೋಜನ ಆಗದೆ ಇರುವುದು ಕಂಡು ಬಂದಿರುವುದರಿಂದ ಹಾಗೂ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಒಂದನೇ ವಲಯ, ಬೆಂಗಳೂರು ರವರು ಈ ಸಂಘಗಳನ್ನು ಸಮಾಪನೆಗೊಳಿಸಿದ ಆದೇಶವು ಕಛೇರಿಗೆ ಬಂದಿರುವುದಿಲ್ಲವೆಂದು ತಿಳಿಸಿದ್ದು ಮತ್ತು ಆದೇಶ ಜಾರಿಯಾಗದೇ ಇರುವುದರಿಂದ ಮಾರ್ಪಾಡು ಆದೇಶದ ಅವಶ್ಯಕತೆ ಕಂಡು ಬಂದಿರುವುದರಿಂದ, ಸಮಾಪನಾ ಅಧಿಕಾರಿಗಳ ಹೆಸರಿನ ಬದಲಾಗಿ ಹುದ್ದೆಯ ಅನುಸಾರವಾಗಿ, ಸಮಾಪನಾಧಿಕಾರಿಗಳನ್ನು ನೇಮಕಾತಿ ಮಾಡುವುದು ಸೂಕ್ತವೆಂದು ಅಭಿಪ್ರಾಯ ವ್ಯಕ್ತಪಡಿಸಿ ಶಿಫಾರಸ್ಸು ಮಾಡಿರುವ ಹಿನ್ನೆಲೆಯಲ್ಲಿ ಈ ಕೆಳಕಂಡ ಪರಿಷ್ಕೃತ ಆದೇಶವನ್ನು ಹೊರಡಿಸಲಾಗಿದೆ.

**"ಆದೇಶ"**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(1) ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಓ/201/ಸಿಎಲ್‌ಎಂ/2008 ದಿ:27–05–2010ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಡಿ.ಪಾಂಡುರಂಗಪ್ಪ, ಸಹಕಾರ ಸಂಘಗಳ ಉಪನಿಬಂಧಕರು–1, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಆದ ನಾನು ಈ ಕೆಳಕಂಡ ಸಹಕಾರ ಸಂಘಗಳನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 72(2)(ಬಿ) ರೀತ್ಯಾ ಸಮಾಪನೆಗೊಳಿಸಿರುತ್ತೇನೆ ಹಾಗೂ ಕಲಂ 73 ರ ರೀತ್ಯಾ ಈ ಆದೇಶದ ಕೆಳಗೆ ತಿಳಿಸಿರುವ ಆಯಾ ಸಂಘಗಳ ಎದುರಿಗೆ ನಮೂದಿಸಿರುವ ಅಧಿಕಾರಿಗಳನ್ನು ಸದರಿ ಸಂಘಗಳ ಸಮಾಪನಾಧಿಕಾರಿಗಳನ್ನಾಗಿ ನೇಮಕಾತಿ ಮಾಡಿರುತ್ತೇನೆ. ಸಮಾಪನಾಧಿಕಾರಿಗಳು ಸಹಕಾರ ಸಂಘಗಳ ಕಾಯ್ದೆ ಕಲಂ 74ರ ರೀತ್ಯಾ ಕ್ರಮ ತೆಗೆದುಕೊಂಡು 6 ತಿಂಗಳೊಳಗೆ ನೋಂದಣಿ ರದ್ಧತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಲಾಗಿದೆ.

| ಕ್ರ. ಸಂ. | ಸಮಾಪನೆಗೊಳಿಸಿರುವ ಸಂಘಗಳ ಹೆಸರು | ಕಲಂ 73ರ ರೀತ್ಯಾ ನೇಮಕಗೊಂಡ ಸಮಾಪನಾಧಿಕಾರಿಗಳ ಹೆಸರು ಮತ್ತು ಪದನಾಮ |
|---|---|---|
| 1. | ಇಂಡಾಕ್ಯೊ ಎಂಪ್ಲಾಯೀಸ್ ಕ್ರೆಡಿಟ್ ಕೋ–ಆಪರೇಟಿವ್ ಲಿ, ಬೆಂಗಳೂರು | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–2, ಸಹಕಾರ ಸಂಘಗಳ ಸಹಾಯಕ ನಿಬಂಧಕ ರವರ ಕಛೇರಿ, ಒಂದನೇ ವಲಯ, ಬೆಂಗಳೂರು |
| 2. | ಬಿನ್ನಿಪೇಟೆ ಗೃಹನಿರ್ಮಾಣ ಸಹಕಾರ ಸಂಘ ನಿ. ಮಂಜುನಾಥನಗರ, ಬೆಂಗಳೂರು | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–2, ಸಹಕಾರ ಸಂಘಗಳ ಸಹಾಯಕ ನಿಬಂಧಕ ರವರ ಕಛೇರಿ, ಒಂದನೇ ವಲಯ, ಬೆಂಗಳೂರು |
| 3. | ಡಾ॥ ಅಂಬೇಡ್ಕರ್ ಎಸ್.ಸಿ/ಎಸ್.ಟಿ ಬಳಕೆದಾರರ ಸಹಕಾರ ಸಂಘ ನಿ., ಲಗ್ಗೆರೆ, ಬೆಂಗಳೂರು | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–2, ಸಹಕಾರ ಸಂಘಗಳ ಸಹಾಯಕ ನಿಬಂಧಕ ರವರ ಕಛೇರಿ, ಒಂದನೇ ವಲಯ, ಬೆಂಗಳೂರು |
| 4. | ಶ್ರೀ ರಾಜರಾಜೇಶ್ವರಿ ರೇಷ್ಮೆ ಕೈಮಗ್ಗ ನೇಕಾರರ ಉತ್ಪಾದನಾ ಮತ್ತು ಮಾರಾಟ ಸಹಕಾರ ಸಂಘ ನಿ., ಬೆಂಗಳೂರು | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–2, ಸಹಕಾರ ಸಂಘಗಳ ಸಹಾಯಕ ನಿಬಂಧಕ ರವರ ಕಛೇರಿ, ಒಂದನೇ ವಲಯ, ಬೆಂಗಳೂರು |

| | | |
|---|---|---|
| 5. | ಲಕ್ಷ್ಮೀ ಮಹಿಳಾ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಗೋಕುಲ ಬೆಂಗಳೂರು | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–2, ಸಹಕಾರ ಸಂಘಗಳ ಸಹಾಯಕ ನಿಬಂಧಕ ರವರ ಕಛೇರಿ, ಒಂದನೇ ವಲಯ, ಬೆಂಗಳೂರು |
| 6. | ಹಂದಿ ಸಾಕಾಣಿಕೆದಾರರ ಸಹಕಾರ ಸಂಘ ನಿ., ಬೆಂಗಳೂರು | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬೆಂಗಳೂರು |
| 7. | ಶುಭೋದಯ ಪತ್ತಿನ ಸಹಕಾರ ಸಂಘ ನಿ., ನಂ.2, ಎಂ. ವೆಂಕಟೇಗೌಡ ಬಿಲ್ಡಿಂಗ್ ಕೆಂಪಾಪುರ ಕೆರೆಯ ಬಸ್ ನಿಲ್ದಾಣ, ಹೆಬ್ಬಾಳ, ಬೆಂಗಳೂರು–45 | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬೆಂಗಳೂರು |
| 8. | ಮೈಸೂರು ಲ್ಯಾಂಪ್ಸ್ ಎಸ್.ಸಿ/ಎಸ್‌ಟಿ ಕ್ರೆಡಿಟ್ ಕೋ–ಆಪರೇಟಿವ್ ಸೊಸೈಟಿ ಲಿ., ಮೈಸೂರು ಲ್ಯಾಂಪ್ಸ್ ಕಾರ್ಖಾನೆ ಆವರಣ, ಮಲ್ಲೇಶ್ವರಂ, ಬೆಂಗಳೂರು–03 | ಸಹಕಾರ ಸಂಘಗಳ ನಿರೀಕ್ಷಕರು, ದಕ್ಷಿಣ–1, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬೆಂಗಳೂರು |

ಈ ಆದೇಶವನ್ನು ನನ್ನ ಸಹಿ ಮತ್ತು ಕಛೇರಿಯ ಮೊಹರಿನೊಂದಿಗೆ ದಿನಾಂಕ:23–11–2010 ರಂದು ನೀಡಲಾಗಿದೆ.

**ಡಿ. ಪಾಂಡುರಂಗಪ್ಪ**

ಸಹಕಾರ ಸಂಘಗಳ ಉಪ ನಿಬಂಧಕರು–1,

ಪಿಆರ್–1670 ಬೆಂಗಳೂರು ನಗರ ಜಿಲ್ಲೆ.

**ಮುಖ್ಯ ಇಂಜಿನಿಯರ್, ಜಲ ಸಂಪನ್ಮೂಲ ಅಭಿವೃದ್ಧಿ ಸಂಸ್ಥೆ, ಆನಂದರಾವ್ ವೃತ್ತ, ಬೆಂಗಳೂರು, ಇವರ ನಡವಳಿಗಳು**

**ವಿಷಯ:** ಶ್ರೀ ವಿ.ಸಿ. ಜೋಗಿ, ಲಿಟರೇಟ್ ಅಸಿಸ್ಟೆಂಟ್, ಇವರ ಮೇಲಿನ ಕ್ರಿಮಿನಲ್ ಆರೋಪವು ನ್ಯಾಯಾಲಯದಲ್ಲಿ ಸಾಬೀತಾಗಿ ಶಿಕ್ಷೆಯಾಗಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಉಲ್ಲೇಖ:**
1) ಸೂಪರಿಂಟೆಂಡಿಂಗ್ ಇಂಜಿನಿಯರ್, (ವಿ) ಮು.ಇಂ. ಕಛೇರಿ, ಕನೀನಿನಿ, ನೀರಾವರಿ (ಉತ್ತರ) ಬೆಳಗಾವಿ ಇವರ ಪತ್ರ ಸಂ:ಎಸ್‌ಇಡಿ/ಕ್ರಿಮಿನಲ್ ಮೊಕದ್ದಮೆ/ಇಎಸ್‌ಎ(ವಿ)/04–05, ದಿನಾಂಕ:10–03–2005.
2) ಮುಖ್ಯ ಇಂಜಿನಿಯರ್, ಕನೀನಿನಿ, ನೀರಾವರಿ (ಉತ್ತರ) ಬೆಳಗಾವಿ ಕಛೇರಿ ಪತ್ರ ಸಂ: ಎಸ್‌ಇಡಿ/ಕ್ರಿ.ಮೊ./ಇಎಸ್‌ಎ/(ವಿ)/07–08, ದಿನಾಂಕ:22–10–2007.
3) ಈ ಕಛೇರಿ ತಿಳುವಳಿಕೆ ಪತ್ರ ಸಂ:ಜಸ/ಇಎಸ್‌ಕ್ಯೂ/ಅಅ/ಅಮಾನತ್ತು/2007–08, ದಿನಾಂಕ:04–01–2008.
4) ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬೆಳಗಾವಿ, ಇವರ ಪತ್ರ ಸಂ:ಜೆಸಿ1/5397/07–08, ದಿನಾಂಕ:15–02–2008.
5) ಮುಖ್ಯ ಇಂಜಿನಿಯರ್, ಕನೀನಿನಿ, ನೀರಾವರಿ (ಉ), ಬೆಳಗಾವಿ, ಇವರ ಪತ್ರ ಸಂ:ಕನೀನಿ/ನೀಉವ/ಇಎಸ್‌ಜಿ/ವಿವ.–01/05–06/1718, ದಿನಾಂಕ:16–06–2010.

**ಪ್ರಸ್ತಾವನೆ:**

ಶ್ರೀ ವಿ.ಸಿ. ಜೋಗಿ, ಲಿಟರೇಟ್ ಅಸಿಸ್ಟೆಂಟ್, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ಮಲಪ್ರಭಾ ಗುಣ ನಿಯಂತ್ರಣ ಉಪವಿಭಾಗ, ನಂ4, ನವಲಗುಂದ ಇವರು ಶ್ರೀ ನಾಗಪ್ಪ ತಂದೆ ಸಿದ್ದಪ್ಪ ಜೋಗಿ ಇವರ ಕೊಲೆ ಪ್ರಕರಣದಲ್ಲಿ ಭಾಗಿಯಾಗಿರುವ ಬಗ್ಗೆ ಕ್ರಿಮಿನಲ್ ಮೊಕದ್ದಮೆ ದಾಖಲಾದ ಪ್ರಯುಕ್ತ ಇವರನ್ನು ಉಲ್ಲೇಖ (1)ರಲ್ಲಿ ದಿನಾಂಕ:17–11–2004 ರಿಂದ ಅನ್ವಯಿಸುವಂತೆ ಅಮಾನತ್ತಿನಲ್ಲಿಡಲಾಗಿತ್ತು, ಸದರಿ ಪ್ರಕರಣದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಧಾರವಾಡ ಇವರ ದಿನಾಂಕ:09–03–2007ರ ತೀರ್ಪಿನಲ್ಲಿ ಇವರ ಮೇಲಿನ ಆರೋಪವು ಸಾಬೀತಾದ್ದರಿಂದ ಇವರಿಗೆ ಜೀವಾವಧಿ ಶಿಕ್ಷೆ ವಿಧಿಸಲಾಗಿದೆ.

ಉಲ್ಲೇಖ (3)ರ ಈ ಕಛೇರಿ ತಿಳುವಳಿಕೆ ಪತ್ರದಲ್ಲಿ ಸದರಿ ನೌಕರರು ಜೀವಾವಧಿ ಶಿಕ್ಷೆಗೆ ಗುರಿಯಾಗಿ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ವರ್ತಿಸಿರುವುದರಿಂದ ಅವರಿಗೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ಏಕೆ ವಿಧಿಸಬಾರದೆಂಬುದಕ್ಕೆ ವಿವರಣೆಯನ್ನು ಕೇಳಲಾಗಿದೆ. ಆಪಾದಿತ ನೌಕರರು ತಮ್ಮ ಲಿಖಿತ ವಿವರಣೆಯನ್ನು ಉಲ್ಲೇಖ (4)ರ ಪತ್ರದ ಮೂಲಕ ಈ ಕಚೇರಿಗೆ ಕಳುಹಿಸಿದ್ದು ಅದರಲ್ಲಿ ನ್ಯಾಯಾಲಯದ ತೀರ್ಪು ಕಾನೂನುಬದ್ಧವಾಗಿಲ್ಲವೆಂದು ಅದನ್ನು ಪ್ರಶ್ನಿಸಿ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ಮೇಲ್ಮನವಿ ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

ಮುಖ್ಯ ಇಂಜಿನಿಯರ್, ಕನೀನಿನಿ, ನೀರಾವರಿ (ಉತ್ತರ) ವಲಯ, ಬೆಳಗಾವಿ, ಇವರು ಉಲ್ಲೇಖ (5)ರ ಪತ್ರದಲ್ಲಿ ಈ ಕಛೇರಿಗೆ ಪ್ರಸ್ತಾವನೆ ಸಲ್ಲಿಸುತ್ತಾ, ಅದರಲ್ಲಿ ಸದರಿ ನೌಕರರು ಅಧೀನ ನ್ಯಾಯಾಲಯದ ತೀರ್ಪಿನ ವಿರುದ್ಧ ಸಲ್ಲಿಸಿದ್ದ ಮೇಲ್ಮನವಿ ಸಂ:828/2007 ರ ಬಗ್ಗೆ ಕರ್ನಾಟಕ ಉಚ್ಚ ನ್ಯಾಯಾಲಯ, ಧಾರವಾಡ ಸಂಚಾರಿ ಪೀಠದ ತೀರ್ಪಿನ ದಿನಾಂಕ:09–12–2009ರಲ್ಲಿ ಸದರಿ ಆಪಾದಿತರಿಗೆ ಅಧೀನ ನ್ಯಾಯಾಲಯದಲ್ಲಿ ವಿಧಿಸಿದ ದಂಡನೆಯನ್ನು ಸ್ಥಿರೀಕರಿಸಿರುವುದರಿಂದ ಸಿ.ಸಿ.ಎ. ನಿಯಮ 14 (1)(ಬಿ) ಪ್ರಕಾರ ಸೂಕ್ತ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ.

ಶ್ರೀ ವಿ.ಸಿ. ಜೋಗಿ, ಲಿಟರೇಟ್ ಅಸಿಸ್ಟೆಂಟ್, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ಮಲಪ್ರಭಾ ಗುಣ ನಿಯಂತ್ರಣ ಉಪವಿಭಾಗ, ನಂ4, ನವಲಗುಂದ ಇವರು ಕ್ರಿಮಿನಲ್ ಆರೋಪದ ಮೇಲೆ ಜೀವಾವಧಿ ಶಿಕ್ಷೆಗೆ ಗುರಿಯಾಗಿರುತ್ತಾರೆ. ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 14(1)ರ ಅನುಸಾರ ನಿಯಮಗಳು 11, 12, ಮತ್ತು 13 ರಲ್ಲಿ ಏನೇ ಹೇಳಿದ್ದರೂ ಕ್ರಿಮಿನಲ್ ನ್ಯಾಯಾಲಯದಲ್ಲಿ ಕ್ರಿಮಿನಲ್ ಆರೋಪಕ್ಕಾಗಿ ದೋಷಸಿದ್ದಿಯಾದ ಸರ್ಕಾರಿ ನೌಕರರನ್ನು ಇಲಾಖಾ ವಿಚಾರಣೆಗೆ ಒಳಪಡಿಸದೆಯೆ ಸೇವೆಯಿಂದ ವಜಾ ಮಾಡುವ ಅಥವಾ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲು ಅವಕಾಶ ಕಲ್ಪಿಸಲಾಗಿದೆ.

ಆದುದರಿಂದ, ಶ್ರೀ ವಿ.ಸಿ. ಜೋಗಿ, ಲಿಟರೇಟ್ ಅಸಿಸ್ಟೆಂಟ್, ಇವರು ಕ್ರಿಮಿನಲ್ ಆರೋಪಕ್ಕೆ ಗುರಿಯಾಗಿ ನ್ಯಾಯಾಲಯವು ಜೀವಾವಧಿ ಶಿಕ್ಷೆ ವಿಧಿಸಿರುವುದರಿಂದ ಇವರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರಿಸುವುದು ಸೂಕ್ತವಲ್ಲವೆಂದು ಪರಿಗಣಿಸಿ ಕ.ನಾ.ಸೇ. (ಸಿಸಿಎ) ನಿಯಮ 8(viii) ರ ಪ್ರಕಾರ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂ:ಜಸಂಅಸಂ/ಇಎಸ್‌ಕ್ಯೂ–2/ಕ್ರಿ.ಆ./ಸ.ಸೇ.ವಜಾ/2010–11, ದಿನಾಂಕ:22ನೇ ನವೆಂಬರ್, 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ವಿ.ಸಿ. ಜೋಗಿ, ಲಿಟರೇಟ್ ಅಸಿಸ್ಟೆಂಟ್, ಸಹಾಯಕ ಕಾರ್ಯಪಾಲಕ ಅಭಿಯಂತರರ ಕಛೇರಿ, ಕನೀನಿನಿ, ಮಲಪ್ರಭಾ ಗುಣ ನಿಯಂತ್ರಣ ಉಪವಿಭಾಗ, ನಂ4, ನವಲಗುಂದ ಇವರ ಮೇಲಿನ ಕ್ರಿಮಿನಲ್ ಆರೋಪವು ಕ್ರಿಮಿನಲ್ ನ್ಯಾಯಾಲಯದಲ್ಲಿ ಸಾಬೀತಾಗಿ ಇವರಿಗೆ ಜೀವಾವಧಿ ಶಿಕ್ಷೆ ವಿಧಿಸಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ)ನಿಯಮ 8(viii) ರ ಪ್ರಕಾರ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

**ಎಸ್. ರಾಜಶೇಖರ,**
ಶಿಸ್ತು ಪ್ರಾಧಿಕಾರಿಗಳು ಹಾಗೂ ಮುಖ್ಯ ಇಂಜಿನಿಯರ್,
ಜ.ಸಂ.ಅ.ಸಂಸ್ಥೆ., ಬೆಂಗಳೂರು.

ಪಿಆರ್–1668

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ, ವಾಣಿಜ್ಯ ತೆರಿಗೆಗಳ ಕಾರ್ಯಾಲಯ–1, ಗಾಂಧಿನಗರ, ಬೆಂಗಳೂರು,**

**ಸಂಖ್ಯೆ:ವಾತೆಅಆ (ಗು.ಸ)/ಸ.ಆ/ಸಿಆರ್–08/2006–07, ದಿನಾಂಕ 08ನೇ ಡಿಸೆಂಬರ್, 2010.**

**ವಾಣಿಜ್ಯ ತೆರಿಗೆ ಆಯುಕ್ತರ ಸುತ್ತೋಲೆ ಸಂಖ್ಯೆ:13/2010–11**

**ವಿಷಯ:** 2003ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯ್ದೆಯಡಿ ಪ್ಲೈವುಡ್ ಮತ್ತು ಕಬ್ಬಿಣದ ವ್ಯಾಪಾರಸ್ಥರಿಗೆ ಹೊಸ ನೊಂದಣಿ ನೀಡುವಾಗ ಮೌಲ್ಯವರ್ಧಿತ ತೆರಿಗೆ ವಿಭಾಗದ ಜಂಟಿ ಆಯುಕ್ತರು ಸ್ಥಳ ಪರಿಶೀಲನೆ ಮತ್ತು ತಪಾಸಣೆ ನಡೆಸುವ ಕುರಿತು ನೀಡಿದ್ದ ಸುತ್ತೋಲೆಯನ್ನು ಹಿಂಪಡೆಯುವ ಬಗೆಗೆ.

**ಉಲ್ಲೇಖ:** ಈ ಕಛೇರಿಯ ಸುತ್ತೋಲೆ ಸಂಖ್ಯೆ:19/2006–07, ದಿನಾಂಕ 28–07–2006.

2003 ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಕಾಯಿದೆಯಡಿ ಪ್ಲೈವುಡ್ ಮತ್ತು ಕಬ್ಬಿಣದ ವ್ಯಾಪಾರಸ್ಥರಿಗೆ ನೋಂದಣಿ ನೀಡುವ ಮುನ್ನ ಮೌಲ್ಯವರ್ಧಿತ ತೆರಿಗೆ ವಿಭಾಗದ ಜಂಟಿ ಆಯುಕ್ತರು ಅಂತಹ ವರ್ತಕರ ಸ್ಥಳಕ್ಕೆ ಭೇಟಿ ನೀಡಿ ನೋಂದಣಿ ಕೋರಿರುವವರು ನೋಂದಣಿ ಅರ್ಜಿಯಲ್ಲಿ ನೀಡಿರುವ ಮಾಹಿತಿಯ ಸತ್ಯಾಸತ್ಯತೆಯ ಕುರಿತು ಪರಿಶೀಲನೆ ಮತ್ತು ತಪಾಸಣೆ ಮಾಡಿದ ನಂತರವೇ ಸಂಬಂಧಿತ ನೊಂದಣಾಧಿಕಾರಿಗಳು (ಮೌಲ್ಯವರ್ಧಿತ ತೆರಿಗೆ ಅಧಿಕಾರಿಗಳು/ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಗಳು) ಅಂತಹ ವರ್ತಕರಿಗೆ ನೋಂದಣಿ ನೀಡಬೇಕೆಂದು ಉಲ್ಲೇಖದಲ್ಲಿನ ಸುತ್ತೋಲೆಯಲ್ಲಿ ನಿರ್ದೇಶಿಸಲಾಗಿತ್ತು.

ಆದರೆ ಈ ರೀತಿ ನೋಂದಣಿ ಕೋರುವ ವರ್ತಕರ ವ್ಯಾಪಾರ ಸ್ಥಳವು ಮೌಲ್ಯವರ್ಧಿತ ತೆರಿಗೆ ವಿಭಾಗದ ಜಂಟಿ ಆಯುಕ್ತರ ಕೇಂದ್ರ ಸ್ಥಳದಿಂದ ದೂರದಲ್ಲಿರುವ ಅಥವಾ ಆ ಸ್ಥಳದಿಂದ ಹೊರಗಿರುವ ಕಾರಣದಿಂದಾಗಿ ಮತ್ತು ಜಂಟಿ ಆಯುಕ್ತರು ಅಧಿಕ ಕಾರ್ಯ ಒತ್ತಡದಲ್ಲಿರುವುದರಿಂದ, ಅವರೇ ವ್ಯಾಪಾರ ಸ್ಥಳಕ್ಕೆ ಖುದ್ದಾಗಿ ಭೇಟಿ ನೀಡಿ ತಪಾಸಣೆ ಮಾಡಿದ ನಂತರವಷ್ಟೇ ನೋಂದಣಿ ನೀಡಬೇಕೆಂದಿರುವ ಸದರಿ ಸುತ್ತೋಲೆಯಲ್ಲಿನ ನಿರ್ದೇಶನವು ಇಂತಹ ಪ್ರಕರಣಗಳಲ್ಲಿ ನೋಂದಣಿ ನೀಡುವಲ್ಲಿ ಅನಗತ್ಯ ವಿಳಂಬಕ್ಕೆ ಕಾರಣವಾಗುತ್ತಿದೆಯೆಂದು ವರ್ತಕ ಮತ್ತು ಕೈಗಾರಿಕಾ ಸಮುದಾಯದ ಪ್ರತಿನಿಧಿಗಳು ಈ ಕಛೇರಿಯ ಗಮನಕ್ಕೆ ತಂದು ಇದಕ್ಕೆ ಸೂಕ್ತ ಪರಿಹಾರ ಕೋರಿರುತ್ತಾರೆ.

ಅವರ ಕೋರಿಕೆಯನ್ನು ಪರಿಶೀಲಿಸಲಾಯಿತು. ಮುಂದಿನ ದಿನಗಳಲ್ಲಿ ಇಲಾಖೆಯು ವಿದ್ಯುನ್ಮಾನ ನೋಂದಣಿ ಪದ್ಧತಿಯನ್ನು ಜಾರಿಗೆ ತರಲಿರುವುದರಿಂದ ತ್ವರಿತಗತಿಯಲ್ಲಿ ನೋಂದಣಿ ನೀಡಲು ಅನುಕೂಲವಾಗುವಂತೆ ಈ ಪ್ರಕ್ರಿಯೆಯನ್ನು ಸರಳಿಕರಿಸುವ ಅಗತ್ಯತೆ ಇದೆ. ಆದುದರಿಂದ ಉಲ್ಲೇಖದ ಸುತ್ತೋಲೆಯಲ್ಲಿ ಮೇಲಿನಂತೆ ನೀಡಿದ್ದ ನಿರ್ದೇಶನಗಳನ್ನು ಹಿಂಪಡೆಯುವ ಅವಶ್ಯಕತೆ ಇದ್ದು ಅದರಂತೆ ಉಲ್ಲೇಖದಲ್ಲಿನ ಸುತ್ತೋಲೆಯನ್ನು ಈ ಮೂಲಕ ಹಿಂಪಡೆಯಲಾಗಿದೆ.

ಪ್ಲೈವುಡ್ ಮತ್ತು ಕಬ್ಬಿಣದ ವ್ಯಾಪಾರಸ್ಥರಿಗೆ ಹೊಸದಾಗಿ ನೋಂದಣಿ ನೀಡುವ ಸಮಯದಲ್ಲಿ ನೋಂದಣಿ ಅಧಿಕಾರಿಯಾದ ಸಂಬಂಧಿಸಿದ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರು/ಉಪ ಮೌಲ್ಯವರ್ಧಿತ ತೆರಿಗೆ ಅಧಿಕಾರಿಯವರು ಅಂತಹ ಪ್ರಕರಣಗಳ ವ್ಯಾಪಾರ ಸ್ಥಳಗಳಿಗೆ ಖುದ್ದು ಭೇಟಿ ನೀಡಿ, ತಪಾಸಣೆ ಮಾಡಿ, ಅಂತಹ ವ್ಯಾಪಾರಸ್ಥರು ಸಲ್ಲಿಸಿದ ನೊಂದಣಿ ಅರ್ಜಿಯಲ್ಲಿ ನಮೂದಿಸಿರುವ ಮಾಹಿತಿಯ ಸತ್ಯಾಸತ್ಯತೆಯನ್ನು ಖಾತರಿಪಡಿಸಿಕೊಂಡು ಆ ನಂತರ ನೋಂದಣಿ ನೀಡುವ ಬಗೆಗೆ ಕ್ರಮ ಕೈಗೊಳ್ಳುವುದು. ಈ ನಿರ್ದೇಶನ ಉಲ್ಲಂಘಿಸಿ ನಿರ್ಲಕ್ಷ್ಯತೆಯಿಂದ ನೋಂದಣಿ ನೀಡಿದರೆ ಅದರಿಂದ ರಾಜಸ್ವಕ್ಕೆ ಹಾನಿಯಾದರೆ ಅದಕ್ಕೆ ಸಂಬಂಧಪಟ್ಟ ನೋಂದಣಿ ಅಧಿಕಾರಿಯವರೇ ನೇರವಾಗಿ ಹೊಣೆಗಾರರಾಗುತ್ತಾರೆ.

**ಪ್ರದೀಪ್ ಸಿಂಗ್ ಖರೋಲ,**
ವಾಣಿಜ್ಯ ತೆರಿಗೆಗಳ ಆಯುಕ್ತರು
(ಕರ್ನಾಟಕ), ಬೆಂಗಳೂರು.

ಪಿಆರ್–1720

**ವಾಣಿಜ್ಯ ತೆರಿಗೆಗಳ ಇಲಾಖೆ**

**ವಾಣಿಜ್ಯ ತೆರಿಗೆಗಳ ಆಯುಕ್ತರವರ ಕಛೇರಿ (ಕರ್ನಾಟಕ), ಗುಪ್ತವಾರ್ತೆ & ಸಮನ್ವಯ,**

**ನಂ.401, 4ನೇ ಮಹಡಿ, ವಿಟಿಕೆ, ಗಾಂಧಿನಗರ, ಬೆಂಗಳೂರು–560009**

**ಸಂಖ್ಯೆ:ಟಿಸಂ.1139/10–11/ವಾತೆಅಆ(ಗು & ಸ)/ಸ.ಆ/ಸಿಆರ್–22/2010–11, ದಿನಾಂಕ 02ನೇ ಡಿಸೆಂಬರ್, 2010.**

**ಸುತ್ತೋಲೆ ಸಂಖ್ಯೆ:12/2010–11**

**ವಿಷಯ:** "ಇ–ಸುಗಮ ಸಾಗಾಣಿಕೆ" ಸೌಲಭ್ಯ ಉಪಯೋಗಿಸಿ ಸರಕುಗಳ ಸಾಗಾಣಿಕೆ ವಿವರಗಳನ್ನು ತನಿಖಾ ಠಾಣೆಯ ಹತ್ತಿರವೇ ಅಂತರ್ಜಾಲ ತಾಣದಲ್ಲಿ ನಮೂದಿಸಿದಾಗ ತನಿಖಾ ಠಾಣೆ ಅಧಿಕಾರಿಗಳು ದಂಡ ವಿಧಿಸದಿರಲು ಸೂಚನೆ.

**ಉಲ್ಲೇಖ:** 1) ಅಧಿಸೂಚನೆ ಸಂಖ್ಯೆ:ವಾತೆಅಆ(ಗು&ಸ)/ಸ.ಆ/ಸಿ.ಆರ್–22/2010–11, ದಿನಾಂಕ:24–5–2010

2) ಆಯುಕ್ತರವರ ಸುತ್ತೋಲೆ ಸಂಖ್ಯೆ:4/2010–11, ದಿನಾಂಕ 1–6–2010.

3) ದಿನಾಂಕ 25–11–2010ರಂದು ಸಂಜೆ 5.30 ಗಂಟೆಯಲ್ಲಿ ವಾತೆಅಆ(ಗು&ಸ). ವಾ/ತೆ/ಅ/ಆ(ಜಾರಿ), ವಾ.ತೆ.ಉ.ಆ (ಜಾರಿ) ಮತ್ತು ವಾ.ತೆ.ಉ.ಆ(ಜಾಗೃತಿ)ರವರೊಂದಿಗೆ ನಡೆಸಿದ ಸಭೆಯಲ್ಲಿನ ಆಯುಕ್ತರವರ ಸೂಚನೆಗಳು.

ತನಿಖಾ ಠಾಣೆಗಳಲ್ಲಿ ದಾಖಲೆಗಳ ಪರಿಶೀಲನೆಯ ವಿಳಂಬವನ್ನು ತಪ್ಪಿಸಲು ಹಾಗೂ ದಾಖಲೆಗಳಲ್ಲಿನ ವಹಿವಾಟನ್ನು ವರ್ತಕರು ಸೂಕ್ತವಾಗಿ ಲೆಕ್ಕಕ್ಕೆ ತೆಗೆದುಕೊಳ್ಳುವಂತೆ ಮಾಡುವ ಸಲುವಾಗಿ ಉಲ್ಲೇಖ (1)ರ ಆಯುಕ್ತರವರ ಅಧಿಸೂಚನೆಯಲ್ಲಿ "ಇ–ಸುಗಮ" ಸಾಗಾಣಿಕೆ ಸೌಲಭ್ಯವನ್ನು ಒದಗಿಸಲಾಗಿತ್ತು. ಸದರಿ ಅಧಿಸೂಚನೆಯನ್ನು ಸೂಕ್ತ ರೀತಿಯಲ್ಲಿ ಜಾರಿಗೆ ತರುವ ಕಾರ್ಯವಿಧಾನವನ್ನು ಉಲ್ಲೇಖ (2)ರ ಆಯುಕ್ತರವರ ಸುತ್ತೋಲೆ ಸಂಖ್ಯೆ–4/2010–11 ದಿನಾಂಕ 1–6–2010 ರಂದು ನೀಡಲಾಗಿತ್ತು. ಸದರಿ ಸುತ್ತೋಲೆಯ ಸೂಚನೆಗಳನ್ನು ಪುನರುಚ್ಚರಿಸುತ್ತಾ ಅಧಿಸೂಚನೆಯ ಅರ್ಥಪೂರ್ಣ ಈಡೇರಿಕೆಗೆ ಈ ಕೆಳಗಿನಂತೆ ಸೂಚಿಸಲಾಗಿದೆ.

ಅಧಿಸೂಚನೆಯನ್ವಯ "ಇ–ಸುಗಮ"ದಲ್ಲಿ ನಮೂದಿಸಬೇಕಾದ ಸರಕನ್ನು ಹೊತ್ತು ಸರಕು ವಾಹನಗಳು ತನಿಖಾ ಠಾಣೆಗೆ ಬಂದಾಗ, ಸರಕು ವಾಹನಗಳಲ್ಲಿ ಸರಕಿನ ಬಗೆಗೆ "ಇ–ಸುಗಮ"ದಲ್ಲಿ ನಮೂದು ಮಾಡದಿದ್ದಲ್ಲಿ ಅಂತಹ ಸರಕು ವಾಹನಗಳ ಮೇಲೆ ದಂಡವನ್ನು ವಿಧಿಸದೇ, ಸರಕು ವಾಹನಗಳ ಮೇಲ್ವಿಚಾರಕರಿಗೆ ಸೂಚನೆಯಿತ್ತು ಸರಕುಗಳ ಬಗೆಗಿನ ವಿವರಗಳನ್ನು "ಇ–ಸುಗಮ"ದಲ್ಲಿ ನಮೂದಿಸುವಂತೆ ಸೂಚಿಸಬೇಕು. ಹಾಗೊಂದು ವೇಳೆ ಸೂಚನೆಯಿತ್ತಾಗ್ಯೂ ಸರಕುಗಳ ವಿವರಗಳನ್ನು "ಇ–ಸುಗಮ"ದಲ್ಲಿ ನಮೂದಿಸದೇ ಹೋದಲ್ಲಿ ಅದನ್ನು ನಮೂದಿಸಲು ನಿರಾಕರಿಸಿದ ಪ್ರಕರಣಗಳಲ್ಲಿ ಮಾತ್ರ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮದ ಕಲಂ–53(12)ರಡಿ ದಂಡ ವಿಧಿಸಬಹುದಾಗಿದೆ. ಏಕೆಂದರೆ, "ಇ–ಸುಗಮ"ವನ್ನು ತುಂಬದೆ ಸರಕು ವಾಹನವನ್ನು ತನಿಖಾ ಠಾಣೆಗೆ ತರುವುದು "ಇ–ಸುಗಮ"ದ ಬಗೆಗಿನ ಅಜ್ಞಾನದಿಂದಾಗಿರಬಹುದು. ಅಂತಹ ಸಂದರ್ಭದಲ್ಲಿ ವಾಹನ ಮೇಲ್ವಿಚಾರಕರಿಗೆ ಸೂಕ್ತ ಸಲಹೆಯನ್ನಿತ್ತು ತನಿಖಾ ಠಾಣೆಗೆ ಹತ್ತಿರವೇ "ಇ–ಸುಗಮ"ವನ್ನು ತುಂಬಿದಲ್ಲಿ ಅಂತಹ ಪ್ರಕರಣವನ್ನು ಆಯುಕ್ತರವರ ಅಧಿಸೂಚನೆ ಪಾಲನೆ ಆಗಿರುವ ಪ್ರಕರಣವೆಂದು ಪರಿಗಣಿಸಬಹುದಾಗಿದೆ ಹಾಗೂ ಅಂತಹ ಪ್ರಕರಣಗಳಲ್ಲಿ ದಂಡವನ್ನು ವಿಧಿಸಬಾರದಾಗಿ ಈ ಮೂಲಕ ಸೂಚಿಸಿದೆ. **ಆದರೆ, ಚಲಿಸುವ ತನಿಖಾ ಠಾಣೆಗಳ ವಿಷಯದಲ್ಲಿ ಸರಕು ವಾಹನವನ್ನು ತನಿಖೆಗೊಳಪಡಿಸುವ ಮೊದಲೇ ಸರಕು ವಿವರಗಳನ್ನು "ಇ–ಸುಗಮ"ದಲ್ಲಿ ತುಂಬಿರಬೇಕು, ಇಲ್ಲವಾದಲ್ಲಿ ಅಂತಹ ಪ್ರಕರಣಗಳಿಗೆ ಕರ್ನಾಟಕ ಮೌಲ್ಯವರ್ಧಿತ ತೆರಿಗೆ ಅಧಿನಿಯಮ, 2003ರ ಕಲಮು 53(12)ರಡಿ ಕ್ರಮ ಕೈಗೊಳ್ಳಬೇಕು.**

ಈ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ವಾಣಿಜ್ಯ ತೆರಿಗೆಗಳ ಆಯುಕ್ತರು
(ಕರ್ನಾಟಕ), ಬೆಂಗಳೂರು.

ಪಿಆರ್–1719

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರು, ತುಮಕೂರು ಉಪವಿಭಾಗ ತುಮಕೂರು, ಇವರ ನ್ಯಾಯಾಲಯದ ನಡವಳಿಕೆಗಳು**

**ಅಧಿಭಾರ ಅರ್ಜಿ ಸಂಖ್ಯೆ:01/2009–10**

**ವಿಷಯ:** ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಅಮೃತೂರು ರೈತರ ಸೇವಾ ಸಹಕಾರ ಬ್ಯಾಂಕ್ ನಿ., ಅಮೃತೂರು ಇದರ ಮಾಜಿ ವ್ಯವಸ್ಥಾಪಕರಾದ ಶ್ರೀ ಪಿ.ಸಿ.ರಾಮಯ್ಯ ಮತ್ತು ಅವರ ಕಾನೂನು ವಾರಸುದಾರರ ಹೆಸರಿನಲ್ಲಿ ಜಂಟಿಯಾಗಿರುವ ಸ್ಥಿರಾಸ್ಥಿಯನ್ನು, ಸಹಕಾರಿ ಕಾಯಿದೆ ಕಲಂ 103 ರಡಿಯಲ್ಲಿ ತೀರ್ಪು ಪೂರ್ವ ಜಪ್ತಿ ಆದೇಶ ಮಾಡುವ ಬಗ್ಗೆ.

**ಉಲ್ಲೇಖ:** 1. ಸಂಘದ ವ್ಯವಸ್ಥಾಪಕರ ಪತ್ರದ ದಿನಾಂಕ:10–11–2010

2. ದಿನಾಂಕ:21–10–2009 ರಂದು ಈ ನ್ಯಾಯಾಲಯದಲ್ಲಿ ದಾಖಲಾಗಿರುವ ಅಧಿಭಾರ ಅರ್ಜಿ ಸಂಖ್ಯೆ:01/2009–2010.

**ಪ್ರಸ್ತಾವನೆ:**

ಶ್ರೀ ಪಿ. ಸಿ. ರಾಮಯ್ಯನವರು ದಿನಾಂಕ:4–4–1975 ರಿಂದ 2005–2006 ರ ಅವಧಿಯಲ್ಲಿ ರೈತರ ಸೇವಾ ಸಹಕಾರ ಬ್ಯಾಂಕ್ ನಿ., ಅಮೃತೂರು, ಕುಣಿಗಲ್ ತಾಲ್ಲೂಕು ಇದರಲ್ಲಿ ಕೆಲಸ ನಿರ್ವಹಿಸುತ್ತಾರೆ. (ದಾವಾ ಅರ್ಜಿಯಲ್ಲಿ ಅರ್ಜಿದಾರರು ದಾಖಲಿಸಿರುವ ಅರ್ಜಿಯಂತೆ) ಇವರು ಸದರಿ ಬ್ಯಾಂಕ್ ಕಾಯಿದೆ ಕಲಂ 64 ರ ವಿಚಾರಣಾ ವರದಿಯಂತೆ ರೂ. 21,46,200–00 ಗಳ ಬ್ಯಾಂಕಿನ ಹಣವನ್ನು ದುರುಪಯೋಗ ಮಾಡಿರುವುದು ಬ್ಯಾಂಕಿನ ಕಲಂ 64 ರ ವಿಚಾರಣಾ ವರದಿಯಿಂದ ಕಂಡು ಬಂದಿರುತ್ತದೆ.

ಈ ರೀತಿಯ ದುರುಪಯೋಗದ ಹಣದ ವಸೂಲಾತಿಗಾಗಿ ಬ್ಯಾಂಕಿನ ವ್ಯವಸ್ಥಾಪಕರು ಉಲ್ಲೇಖ (2) ರ ರೀತ್ಯಾ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 69 ರಡಿಯಲ್ಲಿ ಅಧಿಭಾರ ಅರ್ಜಿಯನ್ನು ದಿನಾಂಕ:21–10–2009 ರಂದು ದಾಖಲು ಮಾಡಿರುತ್ತಾರೆ. ಈ

ದಾವೆಯನ್ನು ಕಡತದ ಮೇಲೆ ತೆಗೆದುಕೊಂಡು, ದಿನಾಂಕ:7-12-2009 ರಿಂದ ವಿಚಾರಣೆ ಪ್ರಾರಂಭಿಸಲು ಆರೋಪದ ಸಹಿತದ ನೋಟಿಸನ್ನು, ದಿನಾಂಕ:16-9-2009 ರಂದು ವಾದಿ ಮತ್ತು ಪ್ರತಿವಾದಿಯವರಿಗೆ ನೀಡಲಾಗಿತ್ತು. ದಿನಾಂಕ:7-12-2009 ರಿಂದ ಪ್ರಾರಂಭಿಸಿ, ದಿನಾಂಕ:19-12-2009 ರವರೆವಿಗೆ ಪ್ರಕರಣದ ವಿಚಾರಣೆಯನ್ನು ನಡೆಸಲಾಗಿರುತ್ತದೆ. (ಇನ್ನೂ ಮುಂದೆ ಬ್ಯಾಂಕ್ ಎಂಬ ಪದಕ್ಕೆ ಬದಲಾಗಿ ಸಂಘವೆಂದು ಕರೆಯಲಾಗುವುದು).

ಪ್ರತಿವಾದಿಯವರು ಕಲಂ 64 ರ ವಿಚಾರಣೆ ವಿರುದ್ಧ ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಇವರ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸಿದ್ದು, ಕಲಂ 64 ರ ವಿಚಾರಣೆ ತಡೆಯಾಜ್ಞೆ ನೀಡಿದ್ದು ವಿಚಾರಣೆಯನ್ನು ಪ್ರತಿವಾದಿಗೆ ಅವಕಾಶ ಕೊಟ್ಟು ಪುನರ್ ಪರಿಶೀಲಿಸಲು ವಿಚಾರಣಾಧಿಕಾರಿಗಳಿಗೆ ಸೂಚಿಸುವಂತೆ ಈ ನ್ಯಾಯಾಲಯಕ್ಕೆ ಆದೇಶ ನೀಡಿರುತ್ತಾರೆ. ಅದರಂತೆ ಕಲಂ 64 ರ ಮರುವಿಚಾರಣೆಗೆ ವಿಚಾರಣಾಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ. ವಿಚಾರಣೆ ಪ್ರಗತಿಯಲ್ಲಿರುತ್ತದೆ.

ಈ ಮಧ್ಯೆ ವಾದಿ ಸಂಘದ 2005-06, 2006-07ನೇ ಸಾಲಿನ ಲೆಕ್ಕಪರಿಶೋಧನಾ ವರದಿ ಬಂದಿದು, ಲೆಕ್ಕಪರಿಶೋಧನಾ ವರದಿ ರೀತ್ಯಾ ರೂ.18,07,861-00 ಗಳನ್ನು ಪ್ರತಿವಾದಿಯವರು ಸಂಘದ ಹಣ ದುರುಪಯೋಗಪಡಿಸಿಕೊಂಡಿದ್ದು ಸಾಬೀತಾಗಿರುತ್ತದೆ. ಹಾಗೂ ಇಷ್ಟು ದೊಡ್ಡ ಪ್ರಮಾಣದ ಹಣದುರುಪಯೋಗದ ಮೊತ್ತವನ್ನು ವಸೂಲಿ ಮಾಡುವುದರಿಂದ ಸಂಘದ ಆರ್ಥಿಕ ಸ್ಥಿತಿಗೆ ಉಪಯೋಗವಾಗುವುದೆಂದು ಹಾಗೂ ನ್ಯಾಯಾಲಯದಲ್ಲಿನ ದಾವೆಯನ್ನು ಹೂಡಿ ಅಂತಿಮ ತೀರ್ಪು ಬರುವವರೆಗೂ ಕಾಯುವಂತಾದರೆ, ಪ್ರತಿವಾದಿಗಳು ಹೊಂದಿರುವ ಆಸ್ತಿಯನ್ನು ವಿಲೇವಾರಿ ಮಾಡಿಕೊಂಡಲ್ಲಿ ದುರುಪಯೋಗದ ಹಣವನ್ನು ವಸೂಲಿ ಮಾಡುವುದು ಕಷ್ಟಸಾಧ್ಯವೆಂದು ತಿಳಿಸುತ್ತಾ, ಪ್ರತಿವಾದಿಗಳು ಮತ್ತು ಅವರ ಕಾನೂನು ವಾರಸುದಾರರು ಹೊಂದಿರುವ ಸ್ಥಿರ ಸ್ವತ್ತನ್ನು ಈ ಮಧ್ಯೆ ಪರಭಾರೆ ಮಾಡದಂತೆ ತಡೆಯಲು, ಸದರಿ ಲೆಕ್ಕ ಪರಿಶೋಧನಾ ವರದಿ ರೀತ್ಯಾ, ಹಾಗೂ ಈ ಮೊದಲೇ ಈ ನ್ಯಾಯಾಲಯದಲ್ಲಿ ದಾಖಲಿಸಿರುವ ಅಧಿಭಾರ ಅರ್ಜಿ:ಸಂಖ್ಯೆ—01/2009-2010 ರ ಜೊತೆಗೆ ಸೇರಿಸಿಕೊಂಡು, ಈ ದುರುಪಯೋಗದ ಹಣದ ವಸೂಲಿ ಕುರಿತು, ಹಣದ ಭದ್ರತೆಗಾಗಿ ದಾವೆಯ ಅಂತಿಮ ಫಲಿತಾಂಶವನ್ನು ಕಾಯ್ದಿರಿಸಿ, ಸದರಿ ಪ್ರತಿವಾದಿಗಳ ಹೆಸರಿನಲ್ಲಿ ಮತ್ತು ಅವರ ಹಕ್ಕು ಬದ್ದ, ಕಾನೂನು ವಾರಸುದಾರರ ಹೆಸರಿನಲ್ಲಿ, ಇರುವ ಸ್ಥಿರಸ್ವತ್ತನ್ನು ಪರಭಾರೆ (ವಿಲೇವಾರಿ) ಮಾಡದಂತೆ ಸಹಕಾರಿ ಕಾಯಿದೆ 1959 ರ ಕಲಂ 103 ರಡಿಯಲ್ಲಿ, ತೀರ್ಪು ಪೂರ್ವ ಜಪ್ತಿ ಆದೇಶ ನೀಡಬೇಕೆಂದು ಕೋರಿರುತ್ತಾರೆ. ಮತ್ತು ದಿನಾಂಕ:09-11-2010 ರಂದು ನಡೆದ ಆಡಳಿತ ಮಂಡಳಿ ಸಭೆಯ ವಿಷಯ ಸಂಖ್ಯೆ: 3 ರಲ್ಲಿ ತೀರ್ಮಾನಿಸಿರುವಂತೆ ಶ್ರೀ ಪಿ.ಸಿ. ರಾಮಯ್ಯನವರು ಮತ್ತು ಅವರ ಕುಟುಂಬದವರು ಹೊಂದಿರುವ ಸ್ತಿರಾಸ್ಥಿಯನ್ನು ಪರಭಾರೆ ಮಾಡಿದಲ್ಲಿ ದುರುಪಯೋಗದ ಹಣವನ್ನು ವಸೂಲಿ ಮಾಡಲು ತೊಂದರೆಯಾಗುವುದೆಂದು ಉದ್ದೇಶಿಸಿ, ಈಗಾಗಲೇ ದಾಖಲು ಮಾಡಿರುವ ದಾವೆಯನ್ನು ಒಳಗೊಂಡಂತೆ ತೀರ್ಪು ಪೂರ್ವ ಜಪ್ತಿ ಆದೇಶ ನೀಡಬೇಕೆಂದು, ಸಹಾಯಕ ನಿಬಂಧಕರನ್ನು ಕೋರಿ ತೀರ್ಮಾನಿಸಿರುವ ಸಭೆ ನಡವಳಿಕೆ ಲಗತ್ತಿಸಿರುತ್ತಾರೆ.

ವಾದಿಗಳು ಸಲ್ಲಿಸಿರುವ ಪ್ರಮಾಣಪತ್ರ ಹಾಗೂ ದಾಖಲಾತಿಗಳನ್ನು ಪರಿಶೀಲಿಸಿ ಪಿ-1 ರಿಂದ ಪಿ-17 ರವರೆಗೆ ನಿಶಾನೆ ಗುರುತು ಮಾಡಲಾಗಿದೆ. ವಾದಿಯವರು ಪ್ರಮಾಣ ಪತ್ರ ಹಾಗೂ 2005-06, 2006-07 ವಾದಿ ಸಂಘದ ಲೆಕ್ಕಪರಿಶೋಧನಾ ವರದಿಯನ್ನು ಪರಿಶೀಲಿಸಿ, ಸತ್ಯಾಂಶತೆಯನ್ನು ತಿಳಿದು, ಆದೇಶಪೂರ್ವ ಜಪ್ತಿ ಮಾಡುವುದರಿಂದ ನ್ಯಾಯೋಜಿತವಾಗಿರುವುದೆಂದು ಹಾಗೂ ಪ್ರತಿವಾದಿಗಳು ಸ್ಥಿರಾಸ್ತಿಯನ್ನು ಪರಭಾರೆ ಮಾಡದಂತೆ ತಡೆಹಿಡಿಯಬಹುದೆಂಬ ಅಂಶವನ್ನು ನ್ಯಾಯಾಲಯವು ಮನಗೊಂಡು, ಸಂಘದ ಹಾಗೂ ಸಂಘದ ಸದಸ್ಯರ ಹಿತದೃಷ್ಟಿಯಿಂದ ಈ ನ್ಯಾಯಾಲಯವು ವಿಚಾರಣೆಗಾಗಿರುವ ಅಧಿಭಾರ ಅರ್ಜಿ ಸಂಖ್ಯೆ 01/2009-10ನ್ನು ಅಂತಿಮ ತೀರ್ಪು ಕಾಯ್ದಿರಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 103 ರನ್ವಯ, ಈ ನ್ಯಾಯಾಲಯದಲ್ಲಿರುವ ದಾವೆಯ ತೀರ್ಪುಪೂರ್ವ, ಈ ಕೆಳಕಂಡ ಷಡ್ಯೂಲ್‌ನಲ್ಲಿನ ಸ್ತಿರಾಸ್ಥಿಗಳನ್ನು ಜಪ್ತಿಮಾಡಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**"ಆದೇಶ"**

**ನಂ.ಸನಿ-32/ಎ.ಬಿ.ಎನ್/ಕಲಂ103/ಅಧಿಭಾರ ಅರ್ಜಿನಂ.1/09-10/2010-11, ದಿನಾಂಕ 12-11-2010**

ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಒ/201/ಸಿಎಲ್‌ಎಂ/2008, ದಿನಾಂಕ:27-05-2010 ರಲ್ಲಿ ಪ್ರತ್ಯಾಯೋಜಿಸಲ್ಪಟ್ಟಿರುವ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 103 ರ ಪ್ರಕಾರ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ, ಶ್ರೀ. ಕೆ. ಗೋಪಾಲರೆಡ್ಡಿ, ಕೆ.ಸಿ.ಎಸ್. ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ತುಮಕೂರು, ಆದ ನಾನು ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ. ಪಿ.ಸಿ. ರಾಮಯ್ಯ ಮಾಜಿ ವ್ಯವಸ್ಥಾಪಕರು, ರೈತರ ಸೇವಾ ಸಹಕಾರ ಸಂಘ ನಿ., ಅಮೃತೂರು, ಕುಣಿಗಲ್ ತಾಲ್ಲೂಕು, ಇವರ ಮತ್ತು ಇವರ ಪತ್ನಿಯವರಾದ ಶ್ರೀಮತಿ ಜಿ.ಲಕ್ಷ್ಮಮ್ಮ ಮತ್ತು ಇವರ ಪುತ್ರರಾದ ಶ್ರೀ ಆರ್.ಅನಿಲ್‌ಕುಮಾರ್ ಇವರ ಹೆಸರಿನಲ್ಲಿರುವ, ಈ ಕೆಳಕಂಡ ಸ್ಥಿರಾಸ್ತಿಗಳನ್ನು ಈ ನ್ಯಾಯಾಲಯದಲ್ಲಿ ವಿಚಾರಣೆಗಾಗಿ ಇರುವ ದಾವೆಯ ಅಂತಿಮ ತೀರ್ಪಿಗೆ ಒಳಪಟ್ಟು, ಈ ಆದೇಶ ಪೂರ್ವ ಜಪ್ತಿ ಆದೇಶ ಹೊರಡಿಸಿರುತ್ತೇನೆ.

ಇವರುಗಳು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೆ ಅಥವಾ ಸ್ವತ್ತುಗಳಿಗೆ ತತ್ಸಮಾನವಾದ ನಗದು ಭದ್ರತೆ ನೀಡುವವರೆಗೆ ವಿಲೇವಾರಿ ಮಾಡುವುದಾಗಲೀ, ಪರಭಾರೆ ಮಾಡುವುದಾಗಲೀ ಅಥವಾ ವರ್ಗಾಯಿಸುವುದಾಗಲೀ ಮಾಡುವಂತಿಲ್ಲ. ಒಂದುವೇಳೆ, ಈ ಆದೇಶವನ್ನು ನಿರ್ಲಕ್ಷಿಸಿ ಈ ಸ್ವತ್ತು ಕೊಂಡಲ್ಲಿ ಅಥವಾ ಇನ್ನಾವುದೇ ವಿಧದಲ್ಲಿ ವರ್ಗಾಯಿಸಿಕೊಂಡಲ್ಲಿ ಅದು ಸಿಂಧುವಾಗುವುದಿಲ್ಲ. (ಸಕ್ರಮವಾಗುವುದಿಲ್ಲ) ಎಂದು ಈ ಮೂಲಕ ಸಾರ್ವಜನಿಕರ ಗಮನಕ್ಕೆ ತರಲಾಗಿದೆ.

ಸಂಘದ ಹಣದುರುಪಯೋಗ ಪಡಿಸಿಕೊಂಡಿರುವ ಶ್ರೀ ಪಿ.ಸಿ. ರಾಮಯ್ಯ, ಮಾಜಿ ವ್ಯವಸ್ಥಾಪಕರು, ಹಾಗೂ ಅವರ ಕಾನೂನುಬದ್ದ ವಾರಸುದಾರರು, ಈ ಜಪ್ತಿ ಆದೇಶದ ವ್ಯಾಪ್ತಿಯಿಂದ ಹೊರಬರಲು ಇಚ್ಚಿಸಿದಲ್ಲಿ, ಜಪ್ತಿಗೊಳಿಸಲ್ಪಟ್ಟ ಆಸ್ತಿಗಳ ಮೌಲ್ಯಕ್ಕೆ ತಕ್ಕಷ್ಟು ಅಥವಾ ಈ ನ್ಯಾಯಾಲಯವು ಸರಿ ಎಂದು ಭಾವಿಸುವ ತಕ್ಕಷ್ಟು ಅಥವಾ ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ, ಹಣದುರುಪಯೋಗದ ಮೊತ್ತ ಮತ್ತು ಬಡ್ಡಿ, ಇತರೆಗೆ ಸಮನಾಗಿ, ನಗದು ಭದ್ರತೆಯನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪವಿಭಾಗ ತುಮಕೂರು ಇವರ ಹೆಸರಿನಲ್ಲಿ ತುಮಕೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ., ಕೇಂದ್ರ ಕಛೇರಿ, ತುಮಕೂರು ಈ ಬ್ಯಾಂಕಿನ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ಮೂಲ ಚಲನ್ ಪ್ರತಿಯನ್ನು ದಿನಾಂಕ: 14-12-2010 ರಂದು ಅಥವಾ ಅದಕ್ಕಿಂತ ಮುಂಚಿತವಾಗಿ ಈ ನ್ಯಾಯಾಲಯಕ್ಕೆ ಹಾಜರುಪಡಿಸುವುದರ ಮೂಲಕ ಈ

ಜಪ್ತಿ ಆದೇಶದಿಂದ ಹೊರಗುಳಿಯಬಹುದೆಂದು ಸಹ ತಿಳಿಸಲಾಗಿದೆ. ಮೇಲೆ ನಿಗದಿಪಡಿಸಿದ ಅವಧಿಯೊಳಗೆ ನಗದು ಭದ್ರತೆ ನೀಡಲು ವ್ಯಾಜ್ಯದ ಪ್ರತಿವಾದಿಗಳು ವಿಫಲವಾದಲ್ಲಿ, ಈ ಷರತ್ತು ಪೂರ್ವಕ ಜಪ್ತಿ ಆದೇಶ ಸ್ಥಿರಗೊಳ್ಳುವುದಲ್ಲದೇ, ಖಾಯಂಗೊಳ್ಳುವುದು ಎಂದು ತಿಳಿಯತಕ್ಕದ್ದು.

ಈ ಆದೇಶವನ್ನು ನನ್ನ ಸಹಿ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ದಿನಾಂಕ:12-11-2010 ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು.
ತುಮಕೂರು ಉಪ-ವಿಭಾಗ ತುಮಕೂರು

**ಸ್ವತ್ತಿನ ಷಡ್ಯೂಲ್**

| ಕ್ರ. ಸಂ. | ಖಾತೆದಾರರ/ಹಕ್ಕುದಾರರ ಹೆಸರು ಮತ್ತು ವಿಳಾಸ | ಖಾತೆ ನಂ./ ಅಸೆಸ್ ಮೆಂಟ್ ನಂ. | ಸರ್ವೆ ನಂ./ ಗ್ರಾಮ | ವಿಸ್ತೀರ್ಣ ಎಕರೆ-ಗುಂಟೆ | ತರಹೆ | ಚೆಕ್ಕುಬಂದಿ |
|---|---|---|---|---|---|---|
| 1. | ಶ್ರೀ ಪಿ.ಸಿ.ರಾಮಯ್ಯ ಬಿನ್. ಚೆನ್ನಯ್ಯ ಉ। ಬಜ್ಜಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 253 | 5 ಚಿಕ್ಕರ್ಜಿಹಳ್ಳಿ | 1.30 | ತರಿ | ಪೂರ್ವಕ್ಕೆ- ಸ.ನಂ.6.4ರ ಗಡಿ<br>ಪಶ್ಚಿಮಕ್ಕೆ-ತೊರೆ<br>ಉತ್ತರಕ್ಕೆ-ಸ.ನಂ. 8. 7 ರ ಗಡಿ<br>ದಕ್ಷಿಣಕ್ಕೆ-ಸ.ನಂ.4 ರ ಗಡಿ |
| 2. | ಶ್ರೀ ಪಿ.ಸಿ.ರಾಮಯ್ಯ ಬಿನ್. ಚೆನ್ನಯ್ಯ ಉ। ಬಜ್ಜಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 136 | 7/2 ಚಿಕ್ಕರ್ಜಿಹಳ್ಳಿ | 0.34 | ತರಿ | ಪೂರ್ವಕ್ಕೆ- ಸ.ನಂ.6ರ ಗಡಿ<br>ಪಶ್ಚಿಮಕ್ಕೆ-ಸ.ನಂ.8 ರಗಡಿ<br>ಉತ್ತರಕ್ಕೆ-ಸ.ನಂ. 7/1 ರ ಗಡಿ<br>ದಕ್ಷಿಣಕ್ಕೆ-ಸ.ನಂ.7/3 ರ ಗಡಿ |
| 3. | ಶ್ರೀ ಪಿ.ಸಿ.ರಾಮಯ್ಯ ಬಿನ್. ಚೆನ್ನಯ್ಯ ಉ। ಬಜ್ಜಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 468 | 150/1ಎ ಪಡುವಗೆರೆ | 0.26 | ತರಿ | ಪೂರ್ವಕ್ಕೆ- ಸ.ನಂ.150/10 ರಗಡಿ<br>ಪಶ್ಚಿಮಕ್ಕೆ-ಸ.ನಂ.144 ರಗಡಿ<br>ಉತ್ತರಕ್ಕೆ-ಸ.ನಂ. 141 ರ ಗಡಿ<br>ದಕ್ಷಿಣಕ್ಕೆ-ಸ.ನಂ.150/2, 121 ರಗಡಿ |
| 4. | ಶ್ರೀ ಪಿ.ಸಿ.ರಾಮಯ್ಯ ಬಿನ್. ಚೆನ್ನಯ್ಯ ಉ। ಬಜ್ಜಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 468 | 150/1ಹೆಚ್ ಪಡುವಗೆರೆ | 0.13 | ತರಿ | ಪೂರ್ವಕ್ಕೆ- ಸ.ನಂ.150/10 ರಗಡಿ<br>ಪಶ್ಚಿಮಕ್ಕೆ-ಸ.ನಂ.144 ರಗಡಿ<br>ಉತ್ತರಕ್ಕೆ-ಸ.ನಂ. 141 ರ ಗಡಿ<br>ದಕ್ಷಿಣಕ್ಕೆ-ಸ.ನಂ.150/2, 121 ರಗಡಿ |
| 5. | ಶ್ರೀ ಪಿ.ಸಿ.ರಾಮಯ್ಯ ಬಿನ್. ಚೆನ್ನಯ್ಯ ಉ। ಬಜ್ಜಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 468 | 3/1 ಎ ಪಡುವಗೆರೆ | 0.07 | ತರಿ | ಪೂರ್ವಕ್ಕೆ- ಸ.ನಂ.3/10 ರಗಡಿ<br>ಪಶ್ಚಿಮಕ್ಕೆ-ಸ.ನಂ.141 ರಗಡಿ<br>ಉತ್ತರಕ್ಕೆ-ಸ.ನಂ. 7ರ ಗಡಿ<br>ದಕ್ಷಿಣಕ್ಕೆ-ಸ.ನಂ.150 ರ ಗಡಿ |
| 6. | ಶ್ರೀಮತಿ. ಜಿ.ಲಕ್ಷ್ಮಮ್ಮ, ಕೋಂ. ಪಿ.ಸಿ.ರಾಮಯ್ಯ ಮತ್ತು ಆರ್. ಅನಿಲ್‌ಕುಮಾರ್ ಬಿನ್ ಪಿ.ಸಿ.ರಾಮಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 174 | 127/1 ಪಡುವಗೆರೆ | 1.08 ಮತ್ತು 2.36 | ತರಿ | ಪೂರ್ವಕ್ಕೆ- ಸ.ನಂ.127/2 ರಗಡಿ<br>ಪಶ್ಚಿಮಕ್ಕೆ-ಸ.ನಂ.128 ರಗಡಿ<br>ಉತ್ತರಕ್ಕೆ-ಸ.ನಂ. 133ರ ಗಡಿ<br>ದಕ್ಷಿಣಕ್ಕೆ-ಸ.ನಂ.111,112 ರ ಗಡಿ |
| 7. | ಶ್ರೀಮತಿ. ಜಿ.ಲಕ್ಷ್ಮಮ್ಮ, ಕೋಂ. ಪಿ.ಸಿ.ರಾಮಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 21 | 128/2 ಪಡುವಗೆರೆ | 0.33 | ಖುಷ್ಕಿ | ಪೂರ್ವಕ್ಕೆ- ಸ.ನಂ.127ರಗಡಿ<br>ಪಶ್ಚಿಮಕ್ಕೆ-ಸ.ನಂ.128/12<br>ರಿಂದ 17 ರಗಡಿ<br>ಉತ್ತರಕ್ಕೆ-ಸ.ನಂ. 128/1ರ ಗಡಿ<br>ದಕ್ಷಿಣಕ್ಕೆ-ಸ.ನಂ.128/3 ರ ಗಡಿ |
| 8. | ಶ್ರೀಮತಿ. ಜಿ.ಲಕ್ಷ್ಮಮ್ಮ, ಕೋಂ. ಪಿ.ಸಿ.ರಾಮಯ್ಯ ಅಮೃತೂರು, ಅಮೃತೂರು ಹೋಬಳಿ, ಕುಣಿಗಲ್ ತಾಲ್ಲೂಕು | 473 | 55 ಪಿ.ಎಕ್ಸ್ 429<br>55 ಎಕ್ಸ್ 429 | 40 x 60 | ಆರ್. ಸಿ.ಸಿ. ಮನೆ ಅಮೃತೂರು | ಪೂರ್ವಕ್ಕೆ- ಸೀನಪ್ಪ ನರವರ ನಿವೇಶನ<br>ಪಶ್ಚಿಮಕ್ಕೆ-ಎ.ಟಿ.ರಂಗನಾಥ್‌ರವರ ನಿವೇಶನ<br>ಉತ್ತರಕ್ಕೆ-ಶ್ರೀನಿವಾಸಯ್ಯ ನವರ ನಿವೇಶನ<br>ದಕ್ಷಿಣಕ್ಕೆ-ಪಂಚಾಯ್ತಿ ರಸ್ತೆ. |

ಸಹಕಾರ ಸಂಘಗಳ ಸಹಾಯಕ ನಿಬಂಧಕರು.
ತುಮಕೂರು ಉಪ ವಿಭಾಗ ತುಮಕೂರು

ಪಿಆರ್-1649

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಡಿಟಿಸಿಆರ್:25/2010–11, ದಿನಾಂಕ:12ನೇ ಅಕ್ಟೋಬರ್, 2010**

**ಆರಕ್ಷಕ ಉಪ ನಿರೀಕ್ಷಕರು, ಕೆಸ್ತೂರು ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಅಪರಾಧ ಸಂಖ್ಯೆ:83/2007, ದಿನಾಂಕ:17–11–2007**

**ಉಪಸ್ಥಿತರು:** ಜೆ.ಎನ್. ಸೋಮೇಶ್ವರ್,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಆರಕ್ಷಕ ಉಪ ನಿರೀಕ್ಷಕರು, ಕೆಸ್ತೂರು ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು. | 1) ಪ್ರಕಾಶ್ ಬಿನ್ ರಾಮು, ಅಲೂರು ಗ್ರಾಮ ಮದ್ದೂರು ತಾಲ್ಲೂಕು<br>2) ರವಿ ಬಿನ್ ಜಿ.ಆರ್.ರಾಮಯ್ಯ, ಗೆಜ್ಜಲಗೆರೆ ಕಾಲೋನಿ ಕಸಬಾ ಹೋಬಳಿ, ಮದ್ದೂರು ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:17–11–2007ರಂದು ರಾತ್ರಿ 08–30 ರ ಸಮಯದಲ್ಲಿ ಮದ್ದೂರು ತಾಲ್ಲೂಕಿನ ಹೆಮ್ಮನಹಳ್ಳಿ ಗ್ರಾಮದ ಶನೇಶ್ವರ ದೇವಸ್ಥಾನ ಇರುವ ಮುಂಭಾಗದ ಮದ್ದೂರು–ತುಮಕೂರು ರಸ್ತೆಯಲ್ಲಿ ಅಕ್ರಮವಾಗಿ 16.920 ಲೀ ಮದ್ಯವನ್ನು ಬಜಾಜ್ ಸಿಟಿ 100 ಬೈಕ್ ಸಂಖ್ಯೆ:ಕೆಎ–11/ಎಲ್–4974 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಪಿರ್ಯಾದುದಾರರು ಈ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32 ಮತ್ತು 34 ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಅಪರಾಧ ಸಂಖ್ಯೆ:83/2007 ರಂತೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಹಾಗೂ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಜಪ್ತುಪಡಿಸಿಕೊಂಡಿರುವ ಸ್ವತ್ತುಗಳನ್ನು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿರುವ ವಸ್ತುಗಳನ್ನು ತಮ್ಮದೆಂದು ಹಕ್ಕು ಸಾಧಿಸಲು ಯಾರು ಮುಂದೆ ಬಾರದೆ ಇರುವುದರಿಂದ ಮೇಲ್ಕಂಡ ಮದ್ಯ, ವಾಹನ ಮತ್ತು ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:31–07–2010ರ ಪತ್ರದ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಕೆಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 16.920 ಲೀ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಮತ್ತು ಇತರೇ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಹಕ್ಕು ಸಾಧಿಸದ ಕಾರಣ ದಿನಾಂಕ:21–08–2010 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಬಜಾಜ್ ಸಿಟಿ 100 ಬೈಕ್ ಸಂಖ್ಯೆ:ಕೆಎ–11/ಎಲ್–4974 ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ಶ್ರೀ ಪಾಪಣ್ಣ ಬಿನ್ ಚಿಕ್ಕತಮ್ಮಣ್ಣ, ಆಲೂರುದೊಡ್ಡಿ, ಮದ್ದೂರು ತಾಲ್ಲೂಕು–ಇವರು ವಾಹನದ ಮಾಲೀಕರೆಂಬುದು ತಿಳಿದುಬಂದಿದ್ದು ಸದರಿಯವರಿಗೆ ದಿನಾಂಕ:31–08–2010 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸಿಟಿ 100 ಬೈಕ್ ಸಂಖ್ಯೆ:ಕೆಎ–11/ಎಲ್–4974 ವಾಹನದಲ್ಲಿ ದಿನಾಂಕ:17–11–2007 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (2) ವರ್ಷ (10) ತಿಂಗಳುಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರು ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/25/2010–11, ದಿನಾಂಕ:12–10–2010**

ಜೆ.ಎನ್. ಸೋಮೇಶ್ವರ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಕೆಸ್ತೂರು ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಅಪರಾಧ ಸಂಖ್ಯೆ:83/2007, ದಿನಾಂಕ:17–11–2007 ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಸಿಟಿ 100 ಬೈಕ್ ಸಂಖ್ಯೆ:ಕೆಎ–11/ಎಲ್–4974 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಅಕ್ಟೋಬರ್ ತಿಂಗಳ 12 ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿಆರ್–1523

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ:ಡಿಟಿಸಿಆರ್:26/2010–11, ದಿನಾಂಕ:12ನೇ ಅಕ್ಟೋಬರ್, 2010**

**ಆರಕ್ಷಕ ಉಪ ನಿರೀಕ್ಷಕರು, ಕೆಸ್ತೂರು ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಅಪರಾಧ ಸಂಖ್ಯೆ:24/2008, ದಿನಾಂಕ:15–4–2008**

**ಉಪಸ್ಥಿತರು:** ಜೆ.ಎನ್. ಸೋಮೇಶ್ವರ್,
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ.

| **ಪಿರ್ಯಾದುದಾರರು** | **ಆರೋಪಿಗಳು** |
|---|---|
| ಆರಕ್ಷಕ ಉಪ ನಿರೀಕ್ಷಕರು, ಕೆಸ್ತೂರು ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು. | 1) ವಾಸು ಬಿನ್ ವೆಂಕಟಪ್ಪ, ಒಕ್ಕಲಿಗರ ಜನಾಂಗ, ಕದಲೂರು ಗ್ರಾಮ, ಮದ್ದೂರು ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:15–04–2008ರಂದು ಸಂಜೆ 05–00 ರ ಸಮಯದಲ್ಲಿ ಮದ್ದೂರು ತಾಲ್ಲೂಕಿನ ಮದ್ದೂರು–ತುಮಕೂರು ರಸ್ತೆಯ ತೂಬಿನಕೆರೆ ಗೇಟ್ ಬಳಿ ಅಕ್ರಮವಾಗಿ 17.280 ಲೀ ಮದ್ಯವನ್ನು ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–11/ಇ–9317 ವಾಹನದಲ್ಲಿ ಹೊಂದಿ ಸಾಗಾಣಿಕೆ ಮಾಡುತ್ತಿದ್ದುದನ್ನು ಪತ್ತೆಮಾಡಿದ ಪಿರ್ಯಾದುದಾರರು ಈ ಅಕ್ರಮವು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 32 ಮತ್ತು 34 ರ ರೀತ್ಯಾ ಅಪರಾಧವಾದ್ದರಿಂದ ಈ ಬಗ್ಗೆ ಅಪರಾಧ ಸಂಖ್ಯೆ:24/2008 ರಂತೆ ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಹಾಗೂ ಈ ಪ್ರಾಧಿಕಾರದ ಪೂರ್ವಾನುಮತಿಯಂತೆ ಜಪ್ತುಪಡಿಸಿಕೊಂಡಿರುವ ಸ್ವತ್ತುಗಳನ್ನು ಅಬಕಾರಿ ನಿರೀಕ್ಷಕರು, ಮದ್ದೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರೆಸಿದ ತನಿಖಾಧಿಕಾರಿಗಳು ಜಪ್ತುಪಡಿಸಿರುವ ವಸ್ತುಗಳನ್ನು ತಮ್ಮದೆಂದು ಹಕ್ಕು ಸಾಧಿಸಲು ಯಾರು ಮುಂದೆ ಬಾರದೆ ಇರುವುದರಿಂದ ಮೇಲ್ಕಂಡ ಮದ್ಯ, ವಾಹನ ಮತ್ತು ಇತರೇ ವಸ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ದಿನಾಂಕ:31–07–2010ರ ಪತ್ರದ ಮೂಲಕ ಕೋರಿರುತ್ತಾರೆ.

ಈ ಮಧ್ಯೆ ಪ್ರಾಧಿಕಾರದಲ್ಲಿ ಮುಟ್ಟುಗೋಲು ನಡುವಳಿಕೆಗಳನ್ನು ಕೈಗೊಂಡಿದ್ದು ತನಿಖಾಧಿಕಾರಿಗಳ ಶಿಫಾರಸ್ಸಿನ ಮೇರೆಗೆ ಪ್ರಕರಣದಲ್ಲಿ ವಶಪಡಿಸಿಕೊಂಡಿರುವ 17.280 ಲೀ ಮದ್ಯ (ರಾಸಾಯನಿಕ ಪರೀಕ್ಷೆಗೆ ತೆಗೆದ ಮಾದರಿ ಹೊರತುಪಡಿಸಿ) ಮತ್ತು ಇತರೇ ವಸ್ತುಗಳನ್ನು ತನ್ನದೆಂದು ಕೋರಿ ಯಾರು ಹಕ್ಕು ಸಾಧಿಸದ ಕಾರಣ ದಿನಾಂಕ:21–08–2010 ರಂದು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–11/ಇ–9317 ವಾಹನಕ್ಕೆ ಸಂಬಂಧಪಟ್ಟಂತೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಡ್ಯ ಇವರು ನೀಡಿರುವ "ಬಿ" ವಹಿಯ ಪರಿಶೀಲನೆಯಿಂದ ಶ್ರೀ ಚಿಕ್ಕರಾಮೇಗೌಡ ಬಿನ್ ಬಿಳೀಗೌಡ, ಕದಲೂರು ಗ್ರಾಮ ಮತ್ತು ಅಂಚೆ, ಮದ್ದೂರು ತಾಲ್ಲೂಕು–ಇವರು ಮಾಲೀಕರೆಂಬುದು ತಿಳಿದುಬಂದಿದ್ದು ಸದರಿಯವರಿಗೆ ದಿನಾಂಕ:31–08–2010 ರಂದು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಬಿ) ರನ್ವಯ ಕಾರಣ ಕೇಳುವ ನೋಟೀಸ್‌ನ್ನು ನೋಂದಣಿ ಅಂಚೆಯ ಮೂಲಕ ನೀಡಲಾಗಿತ್ತು. ನೊಂದಣಿ ಅಂಚೆ ಮೇಲ್ಕಂಡ ವಿಳಾಸದಲ್ಲಿ ಸ್ವೀಕೃತಿಯಾಗಿರುತ್ತದೆ.

ದಾಖಲಾತಿಗಳನ್ನು ಪರಿಶೀಲಿಸಲಾಗಿ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–11/ಇ–9317 ವಾಹನದಲ್ಲಿ ದಿನಾಂಕ:15–04–2008 ರಂದು ಅಕ್ರಮವಾಗಿ ಮದ್ಯಸಾರಯುಕ್ತ ದ್ರವವನ್ನು ಹೊಂದಿ ಸಾಗಾಣಿಕೆ ಮಾಡಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ. ಈ ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು (2) ವರ್ಷ (4) ತಿಂಗಳುಗಳಿಗೂ ಹೆಚ್ಚು ಕಾಲ ಕಳೆದರೂ ಸಹ ಜಪ್ತಿಯಾದ ವಾಹನವು ತನ್ನದೆಂದಾಗಲೀ ಈ ಬಗ್ಗೆ ತಾನು ವಿಚಾರಣೆ ನಡೆಸುತ್ತೇನೆ ಎಂದಾಗಲೀ ಯಾರೊಬ್ಬರು ಇಂದಿನವರೆವಿಗೂ ಖುದ್ದಾಗಿಯಾಗಲೀ, ಅಥವಾ ತನ್ನ ವಕೀಲರ ಮೂಲಕವಾಗಲೀ ಅರ್ಜಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ. ವಾಹನದ ಮಾಲೀಕರಿಗೆ ಸಾಕಷ್ಟು ದಿನಗಳ ಕಾಲಾವಕಾಶವನ್ನು ನೀಡಿದಾಗಲೂ ಸಹ ಈ ಪ್ರಾಧಿಕಾರದಲ್ಲಿ ತನ್ನ ಹಕ್ಕನ್ನು ಸ್ಥಾಪಿಸದೇ ಇರುವುದರಿಂದ, ಸದರಿಯವರು ತನ್ನ ಮೇಲೆ ಹೊರಿಸಿರುವ ಆರೋಪವನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗಿದೆ. ಅಲ್ಲದೇ ಈ ಘಟನೆಯು ಸಂಭವಿಸಿದ ದಿನದಂದು ವಾಹನವು ಯಾರ ವಶದಲ್ಲಿತ್ತೋ ಅವರಿಗೆ ಅಥವಾ ವಾಹನದ ಮಾಲೀಕರಿಗೆ/ಏಜೆಂಟರ್ ಗಮನಕ್ಕೆ ಬಾರದೇ ಮತ್ತು ಅವರುಗಳು ಶಾಮಿಲಾಗದೇ ಹಾಗೂ ಅವರೆಲ್ಲರಿಗೂ ಅರಿವಿಲ್ಲದೇ ಈ ಘಟನೆ ನಡೆದಿದೆ ಎಂಬುದನ್ನು ತೃಪ್ತಿಕರವಾಗಿ ಈ ಪ್ರಾಧಿಕಾರದಲ್ಲಿ ನಿರೂಪಿಸಿರುವುದಿಲ್ಲ. ವಾಹನವನ್ನು ಚಾಲನೆಯಿಲ್ಲದೇ ಹೆಚ್ಚು ಸಮಯ ಇಟ್ಟುಕೊಂಡಲ್ಲಿ ಹವಾಮಾನದ ವೈಪರೀತ್ಯಕ್ಕೆ ಹಾಳಾಗುವ ಮತ್ತು ಬಿಡಿ ಭಾಗಗಳು ತುಕ್ಕು ಹಿಡಿಯುವ ಸಂಭವವಿರುವುದರಿಂದ, ಸರ್ಕಾರದ ಆದಾಯದ ಹಿತದೃಷ್ಟಿಯಿಂದ ಹಾಗೂ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾದ ಅಧಿಕಾರ ಪ್ರಾಧಿಕಾರಕ್ಕೆ ದತ್ತವಾಗಿರುವುದರಿಂದ ಮೇಲ್ಕಂಡ ವಾಹನವನ್ನು ವಾರಸುದಾರರಿಲ್ಲದ ಸ್ವತ್ತು ಎಂದು ಪರಿಗಣಿಸಿ, ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆ ಎಂದು ಅಭಿಪ್ರಾಯಪಟ್ಟು ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ:ಡಿಟಿಸಿಆರ್/26/2010–11, ದಿನಾಂಕ:12–10–2010**

ಜೆ.ಎನ್. ಸೋಮೇಶ್ವರ್, ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಮಂಡ್ಯ ಜಿಲ್ಲೆ, ಮಂಡ್ಯ ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಆರಕ್ಷಕ ಉಪ ನಿರೀಕ್ಷಕರು, ಕೆಸ್ತೂರು ಪೋಲೀಸ್ ಠಾಣೆ, ಮದ್ದೂರು ತಾಲ್ಲೂಕು ಇವರ ಅಪರಾಧ ಸಂಖ್ಯೆ:24/2008, ದಿನಾಂಕ:15–04–2008 ರ ಪ್ರಕರಣದಲ್ಲಿ ಜಪ್ತುಪಡಿಸಿರುವ ಬಜಾಜ್ ಚೇತಕ್ ಸ್ಕೂಟರ್ ಸಂಖ್ಯೆ:ಕೆಎ–11/ಇ–9317 ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 2010 ನೇ ಇಸವಿ ಅಕ್ಟೋಬರ್ ತಿಂಗಳ 12 ನೇ ತಾರೀಖಿನಂದು ವಿಷಯ ನಿರ್ವಾಹಕರಿಗೆ ಉಕ್ತ ಲೇಖನ ನೀಡಿ, ಗಣಕಯಂತ್ರದಲ್ಲಿ ಬೆರಳಚ್ಚು ಮಾಡಿಸಿದ ಪ್ರತಿಯಲ್ಲಿನ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಅಧಿಕೃತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಮಂಡ್ಯ ಜಿಲ್ಲೆ, ಮಂಡ್ಯ.

ಪಿಆರ್–1524

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿಆಸ್ಕರ್ ರಸ್ತೆ, ಬೆಂಗಳೂರು–52**

**ವಿಷಯ:** ಶ್ರೀಮತಿ ಎಸ್.ಕೆ.ಶಿಲ್ಪ, ಸಹಕಾರ ಸಂಘಗಳ ನಿರೀಕ್ಷಕರು (ಪರೀಕ್ಷಾರ್ಥ) ಸಹಕಾರ ಅಭಿವೃದ್ಧಿ ಅಧಿಕಾರಿ ಕಛೇರಿ ಅನೇಕಲ್ ಇವರ ಅನಧಿಕೃತ ಗೈರು ಹಾಜರಾತಿ – ಕರ್ನಾಟಕ ನಾಗರಿಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರನ್ವಯ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸುವ ಕುರಿತು.

**ಉಲ್ಲೇಖ:**
1) ಈ ಕಛೇರಿ ಆದೇಶ ಸಂಖ್ಯೆ:ಸಿಬ್ಬಂದಿ/35/ಇಸಿಎಸ್–1/2007–08 (127) ದಿನಾಂಕ:17–04–2008
2) ಈ ಕಛೇರಿ ಆದೇಶ ಸಂಖ್ಯೆ:ಸಿಬ್ಬಂದಿ/06ಡಬ್ಲ್ಯೂಸಿಆರ್/2009–10, ದಿನಾಂಕ:12–05–2009
3) ಸಹಕಾರ ಸಂಘಗಳ ಉಪ ನಿಬಂಧಕರು–II, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಆರ್‌ಬಿ–2/ಸಿಬ್ಬಂದಿ/ಇಎನ್‌ಎಲ್/9/2010–11, ದಿನಾಂಕ:28–06–2010.
4) ಇದೇ ಸಮಸಂಖ್ಯೆಯ ದಿನಾಂಕ:23–7–2010ರ ಪತ್ರ
5) ಸರ್ಕಾರದ ಪತ್ರ ಸಂ:ಸಇ/314/ಎಸಸೇ/2009, ದಿನಾಂಕ:4–10–2010.

**ಪ್ರಸ್ತಾವನೆ:**

ಶ್ರೀಮತಿ ಎಸ್.ಕೆ.ಶಿಲ್ಪ ಇವರು ಕರ್ನಾಟಕ ಲೋಕಸೇವಾ ಆಯೋಗದ ಮೂಲಕ ಸಹಕಾರ ಸಂಘಗಳ ನಿರೀಕ್ಷಕರಾಗಿ ಸಹಕಾರ ಇಲಾಖೆಗೆ ಆಯ್ಕೆಗೊಂಡು ಉಲ್ಲೇಖ (1)ರ ಆದೇಶದನ್ವಯ ದಿನಾಂಕ:19–04–2008 ರಂದು ಇಲಾಖೆಯ ಸೇವೆಗೆ ಹಾಜರಾಗಿರುತ್ತಾರೆ. ನೇಮಕಾತಿ ಆದೇಶದಲ್ಲಿ ವಿಧಿಸಿದ ಷರತ್ತುಗಳನ್ವಯ ಇವರು ಸೇವೆಗೆ ಹಾಜರಾದ ದಿನಾಂಕದಿಂದ 2 (ಎರಡು) ವರ್ಷಗಳ ಅರ್ಹತಾ ಪರೀಕ್ಷಾರ್ಥ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರನ್ವಯ ತೃಪ್ತಿಕರವಾಗಿ ಪೂರೈಸತಕ್ಕದ್ದಾಗಿದೆ. ಈ ಅವಧಿಯಲ್ಲಿ ಇವರ ಕಾರ್ಯ ನಿರ್ವಹಣೆ, ಹಾಜರಾತಿ, ಶಿಸ್ತು/ನಡತೆ ತೃಪ್ತಿಕರವಾಗಿರದೆ ಇದ್ದಲ್ಲಿ ಅರ್ಹತಾ ಪರೀಕ್ಷಾರ್ಥ ಅವಧಿಯ ಮೊದಲೇ ಆಗಲೀ/ನಂತರವೇ ಆಗಲೀ ಸದರಿ ನಿಯಮಗಳ ನಿಯಮ 6 (1) ರನ್ವಯ ನೇಮಕಾತಿ ಪ್ರಾಧಿಕಾರವು ಉನ್ನತ ಪ್ರಾಧಿಕಾರದ ಸ್ಥಿರೀಕರಣ ಪಡೆದು ಸೇವೆಯಿಂದ ವಿಮುಕ್ತಿಗೊಳಿಸುವ ಆದೇಶ ಜಾರಿಗೊಳಿಸಬೇಕಾಗಿರುತ್ತದೆ.

ಅರ್ಹತಾ ಪರೀಕ್ಷಾರ್ಥ ಅವಧಿಯಲ್ಲಿದ್ದ ಈ ನೌಕರರು ದಿನಾಂಕ:28–04–2009 ರಿಂದ 11–06–2009 ರವರೆಗೆ ವಿದೇಶ ಪ್ರವಾಸ ಕೈಗೊಳ್ಳಲು ಉಲ್ಲೇಖ (2) ರ ಈ ಕಛೇರಿಯ ಆದೇಶದ ಮೂಲಕ ಅನುಮತಿ ಪಡೆದು ಈ ಅವಧಿಯ ನಂತರ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೆ ನೇಮಕಾತಿ ಆದೇಶದಲ್ಲಿ ವಿಧಿಸಿದ ಷರತ್ತುಗಳನ್ನು ಉಲ್ಲಂಘಿಸಿ ದಿನಾಂಕ:12–06–2009 ರಿಂದ ಒಂದು ವರ್ಷಕ್ಕೂ ಮೀರಿ ಸತತವಾಗಿ ಅನಧಿಕೃತ ಗೈರು ಹಾಜರಾಗಿ ಉಳಿದಿರುತ್ತಾರೆ. ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ ಉಳಿದ ಸಂಬಂಧ ಸಹಕಾರ ಸಂಘಗಳ ಉಪ ನಿಬಂಧಕರು– II, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ತಿಳುವಳಿಕೆ ಪತ್ರಗಳನ್ನು ಕಳುಹಿಸಿ ಸಾಕಷ್ಟು ಅವಕಾಶಗಳನ್ನು ನೀಡಿದ್ದರೂ ಸಹ ಈ ನೌಕರರು ಉತ್ತರಿಸದೇ ಅಥವಾ ಕರ್ತವ್ಯಕ್ಕೆ ಹಾಜರಾಗದೇ ತಮ್ಮ ಗೈರು ಹಾಜರಾತಿಯನ್ನು ಮುಂದುವರೆಸಿರುವುದಾಗಿ ಸಹಕಾರ ಸಂಘಗಳ ಉಪ ನಿಬಂಧಕರು– II, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಉಲ್ಲೇಖ (3)ರ ಪತ್ರದ ಮೂಲಕ ವರದಿ ಮಾಡಿ ಇವರ ವಿರುದ್ಧ ಕರ್ನಾಟಕ ನಾಗರಿಕ ಸೇವಾ (ಪರೀಕ್ಷಾರ್ಥ) ನಿಯಮಗಳ 1977 ರನ್ವಯ ಸೂಕ್ತ ಕ್ರಮಕೈಗೊಳ್ಳುವಂತೆ ಪ್ರಸ್ತಾವೆ ಸಲ್ಲಿಸಿರುತ್ತಾರೆ.

ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರನ್ವಯ 2 ವರ್ಷಗಳ ಪರೀಕ್ಷಾರ್ಥ ಅವಧಿಯಲ್ಲಿದ್ದ ಈ ನೌಕರರು ತಮ್ಮ ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮೊದಲೇ ಇವರ ಹಾಜರಾತಿ/ನಡತೆ ತೃಪ್ತಿಕರವಾಗಿರದೆ ಇರುವುದು ಕಂಡು ಬಂದಿರುವುದರಿಂದ ಇವರನ್ನು ಸೇವೆಯಲ್ಲಿ ಮುಂದುವರೆಸುವುದು ಸೂಕ್ತವಲ್ಲವೆಂದು ಮನಗಂಡು ಸದರಿ ನಿಯಮಗಳ ನಿಯಮ 6 (1) ರನ್ವಯ ಸೇವೆಯಿಂದ ವಿಮುಕ್ತಿಗೊಳಿಸಲು ಉದ್ದೇಶಿಸಿ, ಉದ್ದೇಶಿತ ಕ್ರಮವನ್ನು ಸ್ಥಿರೀಕರಿಸುವಂತೆ ಕೋರಿ ಉಲ್ಲೇಖ (4)ರ ಪತ್ರದ ಮೂಲಕ ಸರ್ಕಾರಕ್ಕೆ ಪ್ರಸ್ತಾವೆ ಸಲ್ಲಿಸಲಾಗಿತ್ತು.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು, ಶ್ರೀಮತಿ ಎಸ್.ಕೆ.ಶಿಲ್ಪ, ಸಹಕಾರ ಸಂಘಗಳ ನಿರೀಕ್ಷಕರು (ಪರೀಕ್ಷಾರ್ಥ) ಸಹಕಾರ ಅಭಿವೃದ್ಧಿ ಅಧಿಕಾರಿ ಕಚೇರಿ ಆನೇಕಲ್ ಇವರನ್ನು ಕರ್ನಾಟಕ ನಾಗರಿಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರ ನಿಯಮ 6 (1) ರನ್ವಯ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಲು ಉಲ್ಲೇಖ (5) ರ ಪತ್ರದ ಮೂಲಕ ಅನುಮತಿ ನೀಡಿರುತ್ತದೆ. ಆದ್ದರಿಂದ ಈ ಆದೇಶ.

**"ಆದೇಶ"**

**ಸಂಖ್ಯೆ:ಸಿಬ್ಬಂದಿ/12/ಇಸಿಸಿ/2010–11, ದಿನಾಂಕ:18–11–2010**

ಪ್ರಸ್ತಾವನೆಯಲ್ಲಿ ತಿಳಿಸಿದ ಕಾರಣಗಳಿಂದಾಗಿ, ಕಛೇರಿ ಕೆಲಸಕ್ಕೆ ದೀರ್ಘ ಕಾಲದಿಂದ ಅನಧಿಕೃತ ಗೈರು ಹಾಜರಿಯಲ್ಲಿ ಮುಂದುವರೆದಿರುವ ಶ್ರೀಮತಿ ಎಸ್.ಕೆ.ಶಿಲ್ಪ, ಸಹಕಾರ ಸಂಘಗಳ ನಿರೀಕ್ಷಕರು (ಪರೀಕ್ಷಾರ್ಥ) ಸಹಕಾರ ಅಭಿವೃದ್ಧಿ ಅಧಿಕಾರಿ ಕಛೇರಿ ಅನೇಕಲ್ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಕರ್ನಾಟಕ ನಾಗರಿಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977 ರ ನಿಯಮ 6 (1) ರನ್ವಯ ಸರ್ಕಾರಿ ಸೇವೆಯಿಂದ ವಿಮುಕ್ತಿಗೊಳಿಸಲಾಗಿದೆ.

**ಎಸ್.ಜಿ.ಹೆಗಡೆ,**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ, ಬೆಂಗಳೂರು.

ಪಿಆರ್–1754

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ ತುಮಕೂರು ಜಿಲ್ಲೆ ತುಮಕೂರು**

**2ನೇ ಮಹಡಿ, ಮಿನಿವಿಧಾನಸೌಧ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಸ್ಥಗಿತಗೊಂಡಿರುವ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮಣುವಿನ ಕುರಿಕೆ, ಕೊರಟಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ಆದೇಶ ನೀಡುವ ವಿಚಾರ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ–33/ಸಮಾಪನೆ/ಸಿಆರ್–46/2010–11, ದಿನಾಂಕ:27–8–2010

(2) ಸಂಯುಕ್ತ ಕರ್ನಾಟಕ/ಪ್ರಜಾಪ್ರಗತಿ ದಿನಪತ್ರಿಕೆ ಪ್ರಕಟಣೆ, ದಿನಾಂಕ:03–06–2010.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ಮಣುವಿನ ಕುರಿಕೆ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮಣುವಿನ ಕುರಿಕೆ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ, ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಸನಿ–33/ಆರ್.ಎಸ್.ಆರ್/ಜೆ.ಓ.ಕ್ಯೂ/26494/2000–01, ದಿನಾಂಕ:30–09–2000 ರಲ್ಲಿ ಸಹಾಯಕ ನಿಬಂಧಕರು, ಮಧುಗಿರಿ ಉಪ–ವಿಭಾಗ ಮಧುಗಿರಿ ಇವರಿಂದ ನೊಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 10 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72 (2) (ಬಿ) ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ (1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ, ಆಡಳಿತ ಮಂಡಳಿ ಅಸ್ತಿತ್ವದಲ್ಲಿಲ್ಲದ ಕಾರಣ ಉಲ್ಲೇಖ (2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರುಗಳಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ, ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ ಈ ಕೆಳಕಂಡಂತೆ ಆದೇಶ ನೀಡಿದೆ.

**"ಆದೇಶ"**

**ನಂ.ಡಿಆರ್‌ಟಿ/ಎಲ್‌ಕ್ಯೂಡಿ/ಸಿಆರ್–03/2010–11, ದಿನಾಂಕ:30–11–2010**

ಆರ್.ಲೋಕೇಶ್. ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72(2) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್‌ಎಂ/2008. ದಿನಾಂಕ:27–5–2010 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ. ಮಣುವಿನ ಕುರಿಕೆ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮಣುವಿನ ಕುರಿಕೆ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ. ಇದನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಕೊರಟಗೆರೆ ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ–ಜವಾಬ್ದಾರಿ ತ:ಖ್ತೆಯ ರೀತ್ಯಾ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಅದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿಮಾಡಿ, ಸಂಘದ ನೊಂದಣಿ ರದ್ಧತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:30–11–2010ರಂದು ನೀಡಿರುತ್ತೇನೆ

ಸಹಕಾರ ಸಂಘಗಳ ಉಪನಿಬಂಧಕರು.

ಪಿಆರ್–1755 ತುಮಕೂರು ಜಿಲ್ಲೆ, ತುಮಕೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ ತುಮಕೂರು ಜಿಲ್ಲೆ ತುಮಕೂರು**

**2ನೇ ಮಹಡಿ, ಮಿನಿವಿಧಾನಸೌಧ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಸ್ಥಗಿತಗೊಂಡಿರುವ ತುಂಬಾಡಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ತುಂಬಾಡಿ, ಕೊರಟಗೆರೆ ತಾಲ್ಲೂಕು ಇದನ್ನು ಸಮಾಪನೆಗೊಳಿಸಿ ಆದೇಶ ನೀಡುವ ವಿಚಾರ.

**ಉಲ್ಲೇಖ:** (1) ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪತ್ರದ ಸಂಖ್ಯೆ:ಸನಿ–33/ಸಮಾಪಣೆ/ಸಿಆರ್–46/2010–11, ದಿನಾಂಕ:27–8–2010

(2) ಸಂಯುಕ್ತ ಕರ್ನಾಟಕ/ಪ್ರಜಾಪ್ರಗತಿ ದಿನಪತ್ರಿಕೆ ಪ್ರಕಟಣೆ, ದಿನಾಂಕ:03–06–2010.

**ಪ್ರಸ್ತಾವನೆ:**

ಸ್ಥಗಿತಗೊಂಡಿರುವ ತುಂಬಾಡಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ತುಂಬಾಡಿ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ, ಈ ಸಹಕಾರ ಸಂಘವು ಕ್ರಮ ಸಂಖ್ಯೆ:ಸನಿ–33/ಆರ್.ಎಸ್.ಆರ್/ಜೆ.ಓ.ಕ್ಯೂ/26487/2000–01, ದಿನಾಂಕ:29–09–2000 ರಲ್ಲಿ ಸಹಾಯಕ ನಿಬಂಧಕರು, ಮಧುಗಿರಿ ಉಪ–ವಿಭಾಗ ಮಧುಗಿರಿ ಇವರಿಂದ ನೊಂದಣಿಯಾಗಿರುತ್ತದೆ. ಇದರ ಆಡಳಿತ ವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯುಳ್ಳದ್ದಾಗಿರುತ್ತದೆ. ಸದರಿ ಸಂಘದ ಕಾರ್ಯಚಟುವಟಿಕೆಗಳು 10 ವರ್ಷಗಳಿಂದ ಸ್ಥಗಿತಗೊಂಡಿರುತ್ತದೆ. ಕಾರಣ ಕರ್ನಾಟಕ ಸಹಕಾರ ಸಂಘಗಳ

ಕಾಯಿದೆ 1959 ರ ಕಲಂ 72 (2) (ಬಿ) ಯ ಪ್ರಕಾರ ಸಂಘವನ್ನು ಸಮಾಪನೆಗೊಳಿಸಿ ಆದೇಶ ನೀಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ ಮಧುಗಿರಿ ರವರು ಉಲ್ಲೇಖ (1)ರ ರೀತ್ಯಾ ಕೋರಿ ಪ್ರಸ್ತಾವೆಯನ್ನು ಸಲ್ಲಿಸಿರುತ್ತಾರೆ.

ಅದರಂತೆ ಸದರಿ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ, ಆಡಳಿತ ಮಂಡಳಿ ಅಸ್ತಿತ್ವದಲ್ಲಿಲ್ಲದ ಕಾರಣ ಉಲ್ಲೇಖ (2)ರ ರೀತ್ಯಾ ಪತ್ರಿಕಾ ಪ್ರಕಟಣೆ ನೀಡಿ, ಸಂಘದ ಸದಸ್ಯರ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಈ ಕಛೇರಿಗೆ ಸಲ್ಲಿಸಲು ತಿಳಿಸಲಾಗಿತ್ತು. ಆದರೆ ಈ ಸಂಬಂಧ ಸಂಘದ ಸದಸ್ಯರುಗಳಿಂದಾಗಲೀ, ಸಾರ್ವಜನಿಕರುಗಳಿಂದಾಗಲೀ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ, ಪ್ರಯುಕ್ತ ಸಂಘವನ್ನು ಮುಂದುವರಿಸಿಕೊಂಡು ಹೋಗಲು ಆಸಕ್ತಿ ಇಲ್ಲವೆಂದು ಅಭಿಪ್ರಾಯಪಡುತ್ತಾ ಈ ಕೆಳಕಂಡಂತೆ ಆದೇಶ ನೀಡಿದೆ.

**"ಆದೇಶ"**

**ನಂ.ಡಿಆರ್‌ಟಿ/ಎಲ್‌ಕ್ಯೂಡಿ/ಸಿಆರ್-04/2010-11, ದಿನಾಂಕ:30-11-2010**

ಆರ್.ಲೋಕೇಶ್. ಕೆ.ಸಿ.ಎಸ್. ಸಹಕಾರ ಸಂಘಗಳ ಉಪನಿಬಂಧಕರು ತುಮಕೂರು ಜಿಲ್ಲೆ ತುಮಕೂರು, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959 ರ ಕಲಂ 72(2)(ಬಿ) ಹಾಗೂ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಓ/201/ಸಿಎಲ್‌ಎಂ/2008. ದಿನಾಂಕ:27-5-2010 ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ. ತುಂಬಾಡಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ತುಂಬಾಡಿ, ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ. ಇದನ್ನು ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು ಕೊರಟಗೆರೆ, ಸಹಕಾರ ಅಭಿವೃದ್ಧಿ ಅಧಿಕಾರಿಗಳ ಕಛೇರಿ ಕೊರಟಗೆರೆ ಇವರನ್ನು ಋಣಸಮಾಪನಾಧಿಕಾರಿಯನ್ನಾಗಿ ನೇಮಕಮಾಡಿ ಆದೇಶಿಸಿರುತ್ತೇನೆ.

ಋಣಸಮಾಪನಾಧಿಕಾರಿಗಳು ಸಂಘದ ಪೂರ್ಣಪ್ರಭಾರವನ್ನು ಸಂಬಂಧಪಟ್ಟವರಿಂದ ವಹಿಸಿಕೊಂಡು ಪ್ರಭಾರ ಪಟ್ಟಿಯನ್ನು ಈ ಕಛೇರಿಗೆ ಸಲ್ಲಿಸಲು ತಿಳಿಸಿದೆ. ಹಾಗೂ ಸಂಘದ ಲೆಕ್ಕ ಪರಿಶೋಧನಾ ವರದಿಯಂತೆ ಅಥವಾ ಸಂಘದ ಆಸ್ತಿ-ಜವಾಬ್ದಾರಿ ತ:ಖ್ತೆಯ ರೀತ್ಯಾ ಆಸ್ತಿ ಜವಾಬ್ದಾರಿಯನ್ನು ವಿಲೇವಾರಿ ಮಾಡಲು ಆದ್ಯತಾ ಪಟ್ಟಿಯ ಮೂರು ಪ್ರತಿಗಳನ್ನು ಈ ಕಛೇರಿಗೆ ಅನುಮೋದನೆಗೆ ಸಲ್ಲಿಸಿ ಅನುಮೋದನೆ ಪಡೆದು ಆದ್ಯತೆ ಮೇರೆಗೆ ವಿಲೇವಾರಿಮಾಡಿ, ಸಂಘದ ನೊಂದಣಿ ರದ್ಧತಿಗೆ ಪ್ರಸ್ತಾವೆಯನ್ನು ಸಲ್ಲಿಸುವಂತೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:30-11-2010ರಂದು ನೀಡಿರುತ್ತೇನೆ

ಸಹಕಾರ ಸಂಘಗಳ ಉಪನಿಬಂಧಕರು.

ಪಿಆರ್-1756 ತುಮಕೂರು ಜಿಲ್ಲೆ, ತುಮಕೂರು.

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ ಡಿ.ಟಿ.ಸಿ.ಆರ್. ನಂ. 336/2009-10, ದಿನಾಂಕ:22ನೇ ನವೆಂಬರ್, 2010**

**ಪೋಲೀಸ್ ಉಪ ನಿರೀಕ್ಷಕರು, ಬೀರೂರು ಪೋಲೀಸ್ ಠಾಣೆ ಇವರ ಕ್ರೈಂ ನಂ. 113/2009, ದಿನಾಂಕ:22-12-2009**

**ಉಪಸ್ಥಿತರು:** ಆರ್. ವೆಂಕಟೇಶ್ ಪದಕಿ ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್ ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

| **ಪಿರ್ಯಾದುದಾರರು** | **ಆಪಾದಿತರು** |
|---|---|
| ಪೋಲೀಸ್ ಉಪ ನಿರೀಕ್ಷಕರು, ಬೀರೂರು ಪೋಲೀಸ್ ಠಾಣೆ, | ಸುರೇಶ್ ಬಿನ್ ಲೇಟ್ ರಾಜಪ್ಪ ವಗರೇಹಳ್ಳಿ ಕಡೂರು ತಾಲ್ಲೂಕು |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:22-12-2009 ರಂದು ಮಧ್ಯಾಹ್ನ 2-00 ಗಂಟೆ ಸಮಯದಲ್ಲಿ ಬಂದ ಖಚಿತ ವರ್ತಮಾನದ ಮೇರೆಗೆ ಪೋಲೀಸ್ ಉಪ ನಿರೀಕ್ಷಕರು, ಬೀರೂರು ಪೋಲೀಸ್ ಠಾಣೆ ಇವರು ಸಿಬ್ಬಂದಿಗಳೊಂದಿಗೆ ಮತ್ತು ಪಂಚರುಗಳೊಂದಿಗೆ ಕಡೂರು ತಾಲ್ಲೂಕು ಬೀರೂರು ಹೋಬಳಿ ದೇವರಹಳ್ಳಿ ಗ್ರಾಮದ ಬಸ್ ಸ್ಟಾಪ್‌ನ ಮುಂಭಾಗದ ಹತ್ತಿರ ಕಾಯುತ್ತಿದ್ದಾಗ ಒಬ್ಬ ಆಸಾಮಿಯು ಒಂದು ಪಾಚಿ ಕಲರ್‌ನ ಟಿ.ವಿ.ಎಸ್-ಎಕ್ಸ್‌ಎಲ್ (ನೋಂದಣಿ ಸಂಖ್ಯೆ ಇರುವುದಿಲ್ಲ) ಮೋಟಾರ್ ಸೈಕಲ್‌ನಲ್ಲಿ ಬರುತ್ತಿದ್ದಾಗ ತಡೆದು ನಿಲ್ಲಿಸಿ ಪರಿಶೀಲಿಸಿದಾಗ 2 ಪ್ಲಾಸ್ಟಿಕ್ ಚೀಲದಲ್ಲಿರುವ 2 ರಟ್ಟಿನ ಪೆಟ್ಟಿಗೆಯಲ್ಲಿ 180 ಮಿಲಿಯ 78 ಸೀಸೆಗಳಲ್ಲಿ 14.040 ಲೀಟರ್ ರಾಜ ವಿಸ್ಕಿ ಮದ್ಯ ಹೊಂದಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ಆಸಾಮಿಯಾದ ಸುರೇಶ್ ಬಿನ್ ಲೇಟ್ ರಾಜಪ್ಪ, ವಗರೇಹಳ್ಳಿ, ಕಡೂರು ತಾಲ್ಲೂಕು ಇವರನ್ನು ವಿಚಾರಿಸಿದಾಗ ಮದ್ಯ ಸಾಗಾಣಿಕೆಗೆ ಮಾಡಲು ಪರವಾನಗಿ, ವಗೈರೆ ಇತ್ಯಾದಿ ದಾಖಲೆಗಳನ್ನು ಹಾಜರುಪಡಿಸದೇ ಇಲ್ಲವೆಂದು ನುಡಿದಿರುವುದರಿಂದ ಅಕ್ರಮವೆಂದು ದೃಢಪಡಿಸಿಕೊಂಡು ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಮದ್ಯ, ವಾಹನ ವಶಪಡಿಸಿಕೊಂಡು ಮತ್ತು ಆರೋಪಿಯನ್ನು ದಸ್ತಗಿರಿಗೊಳಿಸಿ ಸ್ವಫಿರ್ಯಾದು ವರದಿಯೊಂದಿಗೆ ಠಾಣೆಗೆ ಬಂದು ಕ್ರೈಂ ನಂ. 113/2009, ದಿನಾಂಕ:22-12-2009 ರಂದು ಮೊಕದ್ದಮೆ ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಘನ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೂ ಸಲ್ಲಿಸಿ ತನಿಖೆ ಮುಂದುವರೆಸಿ, ಅಮಾನತ್ತುಪಡಿಸಿಕೊಂಡ ವಾಹನ ಹಾಗೂ ಮಾದರಿ ಹೊರತುಪಡಿಸಿದ ಮದ್ಯವನ್ನು ಈ ಪ್ರಾಧಿಕಾರದ ಅನುಮತಿ ಪಡೆದು ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರು ದಿನಾಂಕ:01-03-2010 ರಂದು ಪ್ರಾಧಿಕಾರಕ್ಕೆ ಸಲ್ಲಿಸಿರುವ ವರದಿಯಲ್ಲಿ ಸಲ್ಲಿಸಿ ಪೋಲೀಸ್ ಉಪ ನಿರೀಕ್ಷಕರು, ಬೀರೂರು ಪೋಲೀಸ್ ಠಾಣೆ ಇವರು ದಿನಾಂಕ:25-02-2010 ರಂದು ಮೊಕದ್ದಮೆಯಲ್ಲಿ ಅಮಾನತ್ತುಪಡಿಸಿಕೊಂಡ ವಾಹನ ಹಾಗೂ ಮದ್ಯವನ್ನು ಹಸ್ತಾಂತರಿಸಿದ್ದು, ಸದರಿ ಮುದ್ದೇಮಾಲುಗಳಿಗೆ ಇದುವರೆವಿಗೂ ಯಾರೂ ತಮ್ಮದೆಂದು ಹಕ್ಕು ಚಲಾಯಿಸಲು ಮುಂದೆ ಬಂದಿರುವುದಿಲ್ಲ ಹಾಗೂ ಮದ್ಯ ಹಾಗೂ ವಾಹನವನ್ನು ಕಛೇರಿಯಲ್ಲಿ ಇಟ್ಟುಕೊಳ್ಳಲು ಸ್ಥಳಾವಕಾಶದ ಕೊರತೆ ಇರುವುದರಿಂದ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮದ್ಯವನ್ನು ನಾಶಪಡಿಸಲು ಹಾಗೂ ವಾಹನವನ್ನು ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲು ಆದೇಶ ನೀಡಬೇಕೆಂದು ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ ಇವರಿಗೆ ದಿನಾಂಕ:13-05-2010 ರಂದು ಪತ್ರ ಬರೆದು, ಮುಂದುವರೆಸಲಾಗಿತ್ತು. ಆದರೆ ವಾಹನದ ನೋಂದಣಿ ಸಂಖ್ಯೆ ಇಲ್ಲದಿರುವ ಕಾರಣ ಮಾಲೀಕತ್ವ ವಿವರ ಹಾಗೂ ಮೌಲ್ಯ ದೃಢೀಕರಣ ಪತ್ರ ಇದುವರೆವಿಗೂ ಲಭ್ಯವಾಗಿರುವುದಿಲ್ಲ.

ಪ್ರಕರಣದಲ್ಲಿರುವ ಆರೋಪಿಯಾದ ಸುರೇಶ್ ಬಿನ್ ಲೇಟ್ ರಾಜಪ್ಪ, ವಗರೇಹಳ್ಳಿ, ಕಡೂರು ತಾಲ್ಲೂಕು ಇವರಿಗೆ ಜಫ್ತುಪಡಿಸಿದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಅಡಿಯಲ್ಲಿ ನೊಂದಾಯಿತ ಅಂಚೆ ಮೂಲಕ ನೋಟೀಸ್ ಜಾರಿ ಮಾಡಲು ಕ್ರಮ ಕೈಗೊಂಡಿದ್ದು, ನೋಟೀಸ್ ಜಾರಿಯಾಗದೆ

ದಿನಾಂಕ:25–05–2010 ರಂದು "ರಿಟರ್ನ್ ಟು ಸೆಂಡರ್" ಎಂಬ ಷರಾದೊಂದಿಗೆ ವಾಪಸ್ಸು ಪ್ರಾಧಿಕಾರಕ್ಕೆ ಮರಳಿ ಬಂದಿದ್ದ, ಕಾರಣ ಅಬಕಾರಿ ನಿರೀಕ್ಷಕರು ಕಡೂರು ವಲಯ ಇವರ ಮುಖಾಂತರ ಜಾರಿಗೊಳಿಸಲು ಕ್ರಮ ಕೈಗೊಂಡಾಗ ಆರೋಪಿಯು ಚಿಕಿತ್ಸೆಗಾಗಿ ಮಣಿಪಾಲ್ ಆಸ್ಪತ್ರೆಯಲ್ಲಿರುವುದರಿಂದ ಅವರ ಪತ್ನಿ ಶ್ರೀಮತಿ ಎಂ. ಸುನೀತ ಇವರಿಗೆ ಜಾರಿಗೊಳಿಸಿ ಸ್ವೀಕೃತಿ ಪಡೆದು ಸಲ್ಲಿಸಿರುತ್ತಾರೆ.

ಮೊಕದ್ದಮೆಯ ನಡವಳಿಗೆ ಸಂಬಂಧಿಸಿದಂತೆ ಸಹಾಯಕ ಅಭಿಯೋಗ ನಿರ್ದೇಶಕರ ಅಭಿಪ್ರಾಯ ಪಡೆಯಲಾಯಿತು. ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯದಲ್ಲಿ ಪ್ರಕರಣ ದಾಖಲಾಗಿ ಸುಮಾರು 1 ವರ್ಷ ಅವಧಿ ಕಳೆದಿದ್ದು, ಮೊಕದ್ದಮೆಯ ಕೃತ್ಯವು ವಾಹನದ ಮಾಲೀಕರ ಗಮನಕ್ಕೆ ಬಂದು ನಡೆದ ಕೃತ್ಯವಾಗಿರುವುದರಿಂದ ವಾಹನವು ಜಫ್ತಾದಾಗಿನಿಂದ ಈವರೆವಿಗೂ ದೀರ್ಘಕಾಲಾವಧಿಯ ಸಮಯದಲ್ಲಿ ಪ್ರಾಧಿಕಾರದ ಮುಂದೆ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ತಾವಾಗಲೀ ಅಥವಾ ತಮ್ಮ ನ್ಯಾಯಾವಾದಿಗಳ ಮುಖಾಂತರವಾಗಲೀ ಹಾಜರಾಗದೇ ಇರುವುದರಿಂದ ಅಲ್ಲದೆ ಇವರು ಮೊಕದ್ದಮೆಯ ಕೃತ್ಯದಲ್ಲಿ ಶಾಮೀಲಾಗಿರುವುದು ಸ್ಪಷ್ಟವಾಗಿದ್ದು, ವಾಹನದ ನೋಂದಣಿ ಸಂಖ್ಯೆ ಇಲ್ಲದಿರುವ ಕಾರಣ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಭಿಪ್ರಾಯ ಪಟ್ಟಿರುತ್ತಾರೆ.

ಲಭ್ಯವಿದ್ದ ದಾಖಲೆಗಳು ಹಾಗೂ ಆಧಾರಗಳನ್ನು ಗಮನಿಸಿದಾಗ ಸಹಾಯಕ ಅಭಿಯೋಗ ನಿರ್ದೇಶಕರ ವಾದವನ್ನು ಪುರಸ್ಕರಿಸಲು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗುತ್ತದೆ. ಕಾರಣ, ವಾಹನದ ಮಾಲೀಕರು ಪ್ರಾಸಿಕ್ಯೂಷನ್ ಮಾಡಿರುವ ಆರೋಪಗಳನ್ನು ಅಲ್ಲಗಳೆಯಲು ಸಂಪೂರ್ಣ ನಿರ್ಲಕ್ಷರಾಗಿರುವುದರಿಂದ ಅಲ್ಲದೆ ಕಲಂ 43ರ ಅಡಿಯಲ್ಲಿ, ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳೊಳಗಾಗಿ ಆರೋಪಿ ಇಲ್ಲದ ಅಥವಾ ಆರೋಪಿ ಪತ್ತೆಯಾಗದೇ ಇದ್ದಲ್ಲಿ ಮತ್ತು ವಶಪಡಿಸಿಕೊಂಡ ಸ್ವತ್ತುಗಳು ಕರ್ನಾಟಕ ಅಬಕಾರಿ ಕಾಯ್ದೆ, 1965 ರ ಕಲಂ 43 ರ ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಬಾಧ್ಯವಾಗಿದ್ದಲ್ಲಿ, ಯಾರೊಬ್ಬರು ಸದರಿ ಸ್ವತ್ತುಗಳು ಕಾನೂನು ಬದ್ಧವಾಗಿವೆ ಎಂಬ ಸಾಕ್ಷ್ಯಾಧಾರಗಳನ್ನು ಹಾಜರುಪಡಿಸದೇ ಇದ್ದಲ್ಲಿ ಅಂತಹವುಗಳನ್ನು ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದ್ದು, ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿ, ಸರ್ಕಾರದ ರಾಜಸ್ವದ ದೃಷ್ಟಿಯನ್ನು ಗಮನದಲ್ಲಿಟ್ಟುಕೊಂಡು ಈ ಮೊಕದ್ದಮೆಯನ್ನು ಕರ್ನಾಟಕ ಅಬಕಾರಿ ಕಾಯ್ದೆ, 1965 ರ ಕಲಂ 43 (ಸಿ) ಅಡಿಯಲ್ಲಿ ನಡವಳಿಗಳನ್ನು ಜರುಗಿಸಿ ಇತ್ಯರ್ಥಗೊಳಿಸುವುದು ಸಮಂಜಸವೆಂದು ಮನವರಿಕೆಯಾದ ಕಾರಣ ಕೆಳಕಂಡ ಆದೇಶ.

**" ಆದೇಶ "**

ಆರ್. ವೆಂಕಟೇಶ್ ಪದಕಿ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಪೊಲೀಸ್ ಉಪ ನಿರೀಕ್ಷಕರು, ಬೀರೂರು ಪೊಲೀಸ್ ಠಾಣೆ ಇವರ ಕ್ರೈಂ ನಂ. 113/2009, ದಿನಾಂಕ: 22–12–2009 ರಲ್ಲಿ ವಶಪಡಿಸಿಕೊಂಡ ವಾಹನ (ನೋಂದಣಿ ಸಂಖ್ಯೆ ಇರುವುದಿಲ್ಲ) ಪಾಚಿ ಕಲರ್‌ನ ಟಿ.ವಿ.ಎಸ್–ಎಕ್ಸೆಲ್ ಹಾಗೂ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 13.680 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 22ನೇ ನವೆಂಬರ್ 2010 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

**ಆರ್. ವೆಂಕಟೇಶ್ ಪದಕಿ**
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿಆರ್–1672

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**
**ಡಿ.ಟಿ.ಸಿ.ಆರ್. ನಂ. 6/2010–11, ದಿನಾಂಕ:22ನೇ ನವೆಂಬರ್, 2010**

**ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಕಡೂರು ಪೋಲೀಸ್ ಠಾಣೆ ಇವರ ಕ್ರೈಂ ಸಂಖ್ಯೆ:139/2010, ದಿನಾಂಕ:10–05–2010**

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಕಡೂರು ಪೋಲೀಸ್ ಠಾಣೆ, | ಗೋವಿಂದನಾಯ್ಕ ಬಿನ್ ಶ್ಯಾಮಾನಾಯ್ಕ ಸೀನಾನಾಯ್ಕ ಬಿನ್ ಕೃಷ್ಣನಾಯ್ಕ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:09–05–2010 ರಂದು ರಾತ್ರಿ 10–30 ಗಂಟೆಯ ಸಮಯದಲ್ಲಿ ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಕಡೂರು ಪೊಲೀಸ್ ಠಾಣೆ ಮತ್ತು ಸಿಬ್ಬಂದಿಗಳೊಂದಿಗೆ ಪೊಲೀಸ್ ಠಾಣಾ ವ್ಯಾಪ್ತಿಯ ಎನ್.ಹೆಚ್.206ರ ರಸ್ತೆಯ ಚೆಕ್‌ಪೋಸ್ಟ್‌ನಲ್ಲಿ ವಾಹನ ಸಂಖ್ಯೆ:ಕೆಎ:06–ಡಿ:3933 ರ 407 ವಾಹನವನ್ನು ತಪಾಸಣೆ ಮಾಡುತ್ತಿದ್ದಾಗ ವಾಹನದ ಸಂಖ್ಯೆ:ಕೆಎ:18–ಎಸ್:7010ರ ಟಿ.ವಿ.ಎಸ್. ಎಕ್ಸೆಲ್ ಹೆವಿಡ್ಯೂಟಿನಲ್ಲಿ ಅಸಾಮಿಗಳು ಅತೀವೇಗವಾಗಿ ಹಾಗೂ ಅಜಾಗರೂಕತೆಯಿಂದ ವಾಹನವನ್ನು ಚಲಾಯಿಸಿಕೊಂಡು ಬಂದು 407 ವಾಹನಕ್ಕೆ ಡಿಕ್ಕಿ ಹೊಡೆದು ಕೆಳಗೆ ಬಿದ್ದಿದ್ದು, ಪಂಚರ ಸಮಕ್ಷಮ ಟಿ.ವಿ.ಎಸ್. ಎಕ್ಸೆಲ್ ಪರಿಶೀಲಿಸಿ ನೋಡಲಾಗಿ ಗೋಣಿಚೀಲದಲ್ಲಿ 180 ಮಿಲಿಯ 95 ಬಾಟಲಿ ಹೈವೇ ವಿಸ್ಕಿ ಬಾಟಲಿಗಳಲ್ಲಿ 17.100 ಲೀಟರ್ ಮದ್ಯ ಹೊಂದಿದ್ದು, ಅಸಾಮಿಗಳಾದ ಗೋವಿಂದನಾಯ್ಕ ಬಿನ್ ಶ್ಯಾಮಾನಾಯ್ಕ ಇನ್ನೊಬ್ಬ ಸೀನಾನಾಯ್ಕ ಬಿನ್ ಕೃಷ್ಣನಾಯ್ಕ, ಮಾಡಾಳು ಗ್ರಾಮ, ಕಡೂರು ತಾಲ್ಲೂಕು ಇವರು ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ಯಾವುದೇ ಪರವಾನಗಿ ಮತ್ತು ಇತರೆ ವಗೈರೆಗಳನ್ನು ಹಾಜರುಪಡಿಸದೇ ಇದ್ದುದರಿಂದ ಇದು ಅಕ್ರಮ ಮದ್ಯವೆಂದು ದೃಢಪಡಿಸಿಕೊಂಡು ಆರೋಪಿಗಳನ್ನು ದಸ್ತಗಿರಿಗೊಳಿಸಿ, ಸದರಿ ಸ್ವತ್ತುಗಳನ್ನು ವಶಕ್ಕೆ ತೆಗೆದುಕೊಂಡು ಪಂಚರ ಸಮಕ್ಷಮ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಸ್ವ ಫಿರ್ಯಾದು ವರದಿ ಮೇರೆಗೆ ಠಾಣೆ ಕ್ರೈಂ ನಂ. 139/2010 ದಿನಾಂಕ: 09–05–2010 ರಂದು ಮೊಕದ್ದಮೆ ದಾಖಲು ಮಾಡಿ, ಪ್ರಥಮ ಮಾಹಿತಿ ವರದಿಯನ್ನು ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ಸಲ್ಲಿಸಿ, ತನಿಖೆ ಮುಂದುವರೆಸಿ ಪ್ರಕರಣದಲ್ಲಿ ಜಪ್ತುಪಡಿಸಿದ ವಾಹನ ಮತ್ತು ಮದ್ಯವನ್ನು ಮುಂದಿನ ವಿಲೇವಾರಿಗಾಗಿ ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರು ದಿನಾಂಕ:24–09–2010 ರಂದು ವರದಿ ಸಲ್ಲಿಸಿ ಜಫ್ತಾದ ಮದ್ಯ ಮತ್ತು ವಾಹನಕ್ಕೆ ತಮ್ಮದೆಂದು ಯಾರು ಇದುವರೆವಿಗೂ ಹಕ್ಕು ಚಲಾಯಿಸಲು ಮುಂದೆ ಬಂದಿರುವುದಿಲ್ಲ. ಮುದ್ದೆಮಾಲುಗಳನ್ನು ಕಛೇರಿಯಲ್ಲಿ ಇಟ್ಟುಕೊಳ್ಳಲು ಸ್ಥಳಾವಕಾಶದ ಕೊರತೆ ಇರುವುದರಿಂದ ರಾಸಾಯನಿಕ ಪರೀಕ್ಷೆಗೆ ಮಾದರಿ ಹೊರತುಪಡಿಸಿದ ಮದ್ಯ ಹಾಗೂ ವಾಹನ

ಸಂಖ್ಯೆ:ಕೆಎ:18–ಎಸ್:7010 ಟಿ.ವಿ.ಎಸ್. ಎಕ್ಸೆಲ್ ಹೆವಿಡ್ಯೂಟಿ ಮೊಪೆಡನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಹಾಗೂ ಮದ್ಯದ ದಾಸ್ತಾನು ನಾಶಪಡಿಸಲು ಆದೇಶ ನೀಡಬೇಕೆಂದು ವರದಿ ಮಾಡಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ಪ್ರಕರಣದಲ್ಲಿರುವ ಆರೋಪಿಗಳಾದ ಗೋವಿಂದನಾಯ್ಕ ಬಿನ್ ಶ್ಯಾಮನಾಯ್ಕ ಮತ್ತು ಸೀನಾನಾಯ್ಕ ಬಿನ್ ಕೃಷ್ಣನಾಯ್ಕ ಇವರುಗಳ ವಿಳಾಸ ಮಾಡಾಳು ಗ್ರಾಮ, ಕಡೂರು ತಾಲ್ಲೂಕು ಇವರಿಗೆ ಜಫ್ತುಪಡಿಸಿದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಅಡಿಯಲ್ಲಿ ನೊಂದಾಯಿತ ಅಂಚೆ ಮೂಲಕ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡಿದ್ದು, ನೋಟಿಸ್ ದಿನಾಂಕ:08–11–2010 ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಈ ಪ್ರಕರಣದಲ್ಲಿ ಜಫ್ತುಪಡಿಸಿದ ಸ್ವತ್ತುಗಳಿಗೆ ಹಕ್ಕು ಸಾಧಿಸಲು ಯಾರು ಪ್ರಾಧಿಕಾರದ ಮುಂದೆ ಬಂದಿರುವುದಿಲ್ಲ ಹಾಗೂ ಗೋವಿಂದನಾಯ್ಕ ಬಿನ್ ಶ್ಯಾಮಾನಾಯ್ಕ ಮತ್ತು ಸೀನಾನಾಯ್ಕ ಬಿನ್ ಕೃಷ್ಣನಾಯ್ಕ ಇವರುಗಳು ಈ ಪ್ರಾಧಿಕಾರದಿಂದ ನೀಡಲಾದ ಕಲಂ 43 (ಬಿ) ನೋಟಿಸ್‌ನ್ನು ಸ್ವೀಕರಿಸಿಯೂ ಸಹ ಅದಕ್ಕೆ ಪೂರಕವಾಗಿ ಆಪಾದನೆಯನ್ನು ಅಲ್ಲಗಳೆಯಲು ಯಾವುದೇ ದಾಖಲೆಗಳ ಮೂಲಕವಾಗಲೀ ಅಥವಾ ಸಾಕ್ಷ್ಯಗಳ ಮೂಲಕವಾಗಲಿ ತಾವು ಕೃತ್ಯದಲ್ಲಿ ಭಾಗಿಯಾಗಿಲ್ಲ ಮತ್ತು ಈ ಕೃತ್ಯಕ್ಕೆ ವಾಹನವನ್ನು ಬಳಸಲಾಗಿಲ್ಲವೆಂಬ ಬಗ್ಗೆ ನಿರೂಪಿಸದೇ ಇರುವ ಅಂಶಗಳು, ಸಾಕ್ಷ್ಯಗಳು ಹಾಗೂ ಪ್ರಾಧಿಕಾರದ ಮುಂದೆ ಇರುವ ದಾಖಲೆಗಳನ್ನು ಸಹಾಯಕ ಅಭಿಯೋಗ ನಿರ್ದೇಶಕರು, ಪ್ರಾಧಿಕಾರದ ಮುಂದೆ ವಾದ ಮಂಡಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಮೊಕದ್ದಮೆ ದಾಖಲಾಗಿ 6 ತಿಂಗಳು ಅವಧಿ ಕಳೆದಿದ್ದು, ವಾಹನದ ಮಾಲೀಕರೆಂದು ಯಾರು ಮುಂದೆ ಬಂದು ಹಕ್ಕು ಸಾಧಿಸಿರುವುದಿಲ್ಲ ಪ್ರಕರಣದಲ್ಲಿರುವ ಆರೋಪಿಗಳಿಗೆ ನೋಟಿಸ್ ಜಾರಿಯಾಗಿದ್ದರೂ ಸಹ, ನೋಟಿಸ್‌ಗೆ ಸಮಜಾಯಿಸಿ ಸಲ್ಲಿಸಿರುವುದಿಲ್ಲ. ಅಲ್ಲದೆ ಯಾರು ವಾಹನ ಮತ್ತು ಮದ್ಯದ ಮೇಲೆ ಹಕ್ಕು ಸಾಧಿಸಲು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷಧಾರಗಳ ಮುಖಾಂತರ ಪ್ರಾಧಿಕಾರದ ಮುಂದೆ ಇದುವರೆವಿಗೂ ತಾವಾಗಲೀ ಅಥವಾ ತಮ್ಮ ನ್ಯಾಯವಾದಿಗಳ ಮುಖಾಂತರವಾಗಲಿ ಹಾಜರಾಗಿ ಸಾಬೀತುಪಡಿಸದೇ ಇರುವುದರಿಂದ ಸಹಾಯಕ ಅಭಿಯೋಗ ನಿರ್ದೇಶಕರವರ ವಾದದಿಂದ ಮೇಲ್ನೋಟಕ್ಕೆ ಸಾಬೀತಾಗುವುದರಿಂದ ಅಲ್ಲದೇ ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಹಾಗೂ ಜಫ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ವಶಪಡಿಸಿಕೊಂಡ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**" ಆದೇಶ "**

ಆರ್. ವೆಂಕಟೇಶ್ ಪದಕಿ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಕಡೂರು ಪೊಲೀಸ್ ಠಾಣೆ ಇವರ ಕ್ರೈಂ ನಂ. 139/2010, ದಿನಾಂಕ: 10–05–2010 ರಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ:ಕೆ.ಎ.18–ಎಸ್:7010 (ಟಿ.ವಿ.ಎಸ್. ಎಕ್ಸೆಲ್ ಹೆವಿಡ್ಯೂಟಿ) ಹಾಗೂ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 16.920 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 22ನೇ ನವೆಂಬರ್ 2010 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

**ಆರ್. ವೆಂಕಟೇಶ್ ಪದಕಿ**
ಅಧಿಕಾರಯುತ ಅಧಿಕಾರಿ ಹಾಗೂ
ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿಆರ್–1673

**ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ ಡಿ.ಟಿ.ಸಿ.ಆರ್. ನಂ. 211/2010–11, ದಿನಾಂಕ:15ನೇ ಡಿಸೆಂಬರ್, 2010**

**ಪೊಲೀಸ್ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣೆ ಇವರ ಕ್ರೈಂ ನಂ.42/2010, ದಿನಾಂಕ:08–09–2010**

**ಉಪಸ್ಥಿತರು:** ಆರ್. ವೆಂಕಟೇಶ ಪದಕಿ ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಫಿರ್ಯಾದುದಾರರು** | **ಆಪಾದಿತರು** |
|---|---|
| ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣೆ, | ಆರೋಪಿ ಓಡಿಹೋಗಿರುತ್ತಾನೆ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:08–09–2010 ರಂದು 16–00 ಗಂಟೆ ಸಮಯದಲ್ಲಿ ಖಚಿತ ವರ್ತಮಾನದ ಮೇರೆಗೆ ಸಹಾಯಕ ಪೊಲೀಸ್ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣೆ ಇವರು ಸಿಬ್ಬಂದಿಗಳು ಹಾಗೂ ಪಂಚರುಗಳೊಂದಿಗೆ ಮೂಡಿಗೆರೆ ತಾಲ್ಲೂಕು ಮರಸಣಿಗೆ ಗ್ರಾಮದ ಮಲಗಾರು ಎಂಬಲ್ಲಿ ಕಳಸ ಕಡೆಯಿಂದ–ಕೊಟ್ಟಿಗೆಹಾರದ ಕಡೆಗೆ ಹಾದು ಹೋಗುವ ಟಾರು ರಸ್ತೆಯ ಪಕ್ಕದಲ್ಲಿ ವಿಜಯಕುಮಾರವರ ಗದ್ದೆ ಮತ್ತು ತೋಟದ ಕಡೆ ಹಾದು ಹೋಗಿರುವ ಮಣ್ಣಿನ ರಸ್ತೆಯಲ್ಲಿ ಗಸ್ತು ಕಾರ್ಯ ನಿರ್ವಹಿಸುತ್ತಿದ್ದಾಗ ಬರುತ್ತಿದ್ದ ಒಂದು ಟಾಟಾ ಸುಮೋ ವಾಹನವನ್ನು ತಡೆದು ನಿಲ್ಲಿಸಲು ಪ್ರಯತ್ನಿಸಿದಾಗ ಇಲಾಖೆ ವಾಹನ ಕಂಡಾಗ ವೇಗವಾಗಿ ಚಾಲನೆ ಮಾಡಿಕೊಂಡು ಹೋದಾಗ ವಾಹನವನ್ನು ಬೆನ್ನಟ್ಟಿದಾಗ ಮರಸಣಿಗೆ–ಗಾಳಿಗಂಡಿ ಕ್ರಾಸ್‌ನಿಂದ 1 ಕಿ.ಮೀ. ದೂರದ ಸದರಿ ಸ್ಥಳದಲ್ಲಿ ವಾಹನವನ್ನು ನಿಲ್ಲಿಸಿ, ಚಾಲಕ ಮತ್ತು ವಾಹನದಲ್ಲಿದ್ದ ವ್ಯಕ್ತಿ ಓಡಿ ಹೋಗಿದ್ದು, ಆರೋಪಿಗಳು ಯಾರೆಂದು ತಿಳಿದು ಬಂದಿರುವುದಿಲ್ಲ.

ವಾಹನವನ್ನು ಪರಿಶೀಲಿಸಿದಾಗ ಕೆಎ:34–5475ರ ಬಿಳಿಬಣ್ಣದ ಟಾಟಾಸುಮೋ ವಾಹನವಾಗಿದ್ದು, ಅದರಲ್ಲಿ 2 ಪ್ಲಾಸ್ಟಿಕ್ ಕ್ಯಾನ್‌ಗಳಲ್ಲಿ ಒಟ್ಟು 10 ಲೀಟರ್ ಕಳ್ಳಭಟ್ಟಿ ಸಾರಾಯಿ ಹೊಂದಿದ್ದು. ಈ ಬಗ್ಗೆ ಯಾವುದೇ ದಾಖಲೆಗಳು ಲಭ್ಯವಾಗದೇ ಇರುವ ಕಾರಣ ಕಳ್ಳಭಟ್ಟಿ ಸಾರಾಯಿ ಮತ್ತು ವಾಹನವನ್ನು ಅಮಾನತ್ತುಪಡಿಸಿಕೊಂಡು ಠಾಣೆಗೆ ಬಂದು ಹಾಜರುಪಡಿಸಿ, ನೀಡಿದ ಫಿರ್ಯಾದು ವರದಿ ಮೇರೆಗೆ ಪೊಲೀಸ್ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣೆ ಇವರು ಕ್ರೈಂ ನಂ.42/2010, ದಿನಾಂಕ:08–09–2010 ರಂದು ಮೊಕದ್ದಮೆ ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಘನ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೂ ಸಲ್ಲಿಸಿ ತನಿಖೆ ಮುಂದುವರೆಸಿ, ಪ್ರಾಧಿಕಾರದ ಅನುಮತಿ ಮೇರೆಗೆ ಮುಂದಿನ ವಿಲೇವಾರಿಗಾಗಿ ವಾಹನ ಮತ್ತು ಕಳ್ಳಭಟ್ಟಿ ಸಾರಾಯಿಯನ್ನು ಅಬಕಾರಿ ನಿರೀಕ್ಷಕರು, ಮೂಡಿಗೆರೆ ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಕಳ್ಳಭಟ್ಟಿ ಸಾರಾಯಿಗೆ ಸಂಬಂಧಿಸಿದಂತೆ, ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಯ ರೀತ್ಯಾ ಪ್ರಾರಂಭಿಸಿದ್ದು, ಈ ಸಂಬಂಧ ಪ್ರಕರಣದಲ್ಲಿ ಜಪ್ತುಪಡಿಸಿದ ವಾಹನ ಸಂಖ್ಯೆ:ಕೆಎ:34–5475 ರ ಟಾಟಾಸುಮೋ ವಾಹನಕ್ಕೆ ಸಂಬಂಧಿಸಿದಂತೆ ಲಭ್ಯವಿದ್ದ ನಕಲು ದಾಖಲೆ "ಬಿ" ಎಕ್ಸ್‌ಟ್ರಾಕ್ಟ್ ಪ್ರಕಾರ ಶ್ರೀ ಮಹಮದ್ ಮಕ್‌ಸೂದ್ ಬಿನ್ ಅಬ್ದುಲ್ ರೆಹಿಮಾನ್, ಮನೆ ನಂ. 7–196, ದರ್ಗ ಹತ್ತಿರ ಕೋಟೆಬಾಗಿಲು, ಮೂಡಬಿದರೆ ಬ್ಲಾಕ್ ನಂ.7, ಮೂಡಬಿದರೆ ಇವರಿಗೆ ಜಫ್ತುಪಡಿಸಿದ ಕಳ್ಳಭಟ್ಟಿ ಸಾರಾಯಿ ಹಾಗೂ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಅಡಿಯಲ್ಲಿ ನೊಂದಾಯಿತ ಅಂಚೆ ಮೂಲಕ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡಿದ್ದು, ನೋಟಿಸ್ ದಿನಾಂಕ:24–11–2010 ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಈ ಪ್ರಕರಣದಲ್ಲಿ ಜಫ್ತುಪಡಿಸಿದ ಸ್ವತ್ತುಗಳಿಗೆ ಹಕ್ಕು ಸಾಧಿಸಲು ಶ್ರೀ ಮಹಮದ್ ಮಕ್‌ಸೂದ್ ಬಿನ್ ಅಬ್ದುಲ್ ರೆಹಿಮನ್ ಇವರು ಈ ಪ್ರಾಧಿಕಾರದಿಂದ ನೀಡಲಾದ ಕಲಂ 43 (ಬಿ) ನೋಟಿಸ್‌ನ್ನು ಸ್ವೀಕರಿಸಿಯೂ ಸಹ ಅದಕ್ಕೆ ಪೂರಕವಾಗಿ ಪ್ರಾಧಿಕಾರದ ಮುಂದೆ ಬಂದಿರುವುದಿಲ್ಲ. ಅಲ್ಲದೇ ಆಪಾದನೆಯನ್ನು ಅಲ್ಲಗೆಳೆಯಲು ಯಾವುದೇ ದಾಖಲೆಗಳ ಮೂಲಕವಾಗಲೀ ಅಥವಾ ಸಾಕ್ಷ್ಯಗಳ ಮೂಲಕವಾಗಲಿ ತಾವು ಕೃತ್ಯದಲ್ಲಿ ಭಾಗಿಯಾಗಿಲ್ಲ ಮತ್ತು ಈ ಕೃತ್ಯಕ್ಕೆ ವಾಹನವನ್ನು ಬಳಸಲಾಗಿಲ್ಲವೆಂಬ ಬಗ್ಗೆ ನಿರೂಪಿಸದೇ ಇರುವ ಅಂಶಗಳು, ಪ್ರಾಧಿಕಾರದ ಮುಂದೆ ಇರುವ ದಾಖಲೆಗಳಿಂದ ಸಹಾಯಕ ಅಭಿಯೋಗ ನಿರ್ದೇಶಕರು, ಪ್ರಾಧಿಕಾರದ ಮುಂದೆ ವಾದ ಮಂಡಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಮೊಕದ್ದಮೆ ದಾಖಲಾಗಿ 3 ತಿಂಗಳು 6 ದಿವಸ ಅವಧಿ ಕಳೆದಿದ್ದು, ವಾಹನದ ಮಾಲೀಕರು ಮುಂದೆ ಬಂದು ಹಕ್ಕು ಸಾಧಿಸಿರುವುದಿಲ್ಲ ಹಾಗೂ ನೋಟಿಸ್‌ಗೆ ಸಮಜಾಯಿಸಿ ಸಲ್ಲಿಸಿರುವುದಿಲ್ಲ. ಅಲ್ಲದೆ ಯಾರು ವಾಹನದ ಮೇಲೆ ಹಕ್ಕು ಸಾಧಿಸಲು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷಾಧಾರಗಳ ಮುಖಾಂತರ ಪ್ರಾಧಿಕಾರದ ಮುಂದೆ ಇದುವರೆವಿಗೂ ತಾವಾಗಲೀ ಅಥವಾ ತಮ್ಮ ನ್ಯಾಯವಾದಿಗಳ ಮುಖಾಂತರವಾಗಲಿ ಹಾಜರಾಗಿ ಸಾಬೀತುಪಡಿಸದೇ ಇರುವುದರಿಂದ ಸಹಾಯಕ ಅಭಿಯೋಗ ನಿರ್ದೇಶಕರವರ ವಾದದಿಂದ ಮೇಲ್ನೋಟಕ್ಕೆ ಸಾಬೀತಾಗುವುದರಿಂದ ಅಲ್ಲದೇ ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ವಾಹನದ ಮೇಲೆ ಆಸಕ್ತಿ ಇಲ್ಲವೆಂದು ಹಾಗೂ ಜಫ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ವಶಪಡಿಸಿಕೊಂಡ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆಯಾಗಿರುವುದರಿಂದ ಈ ಕೆಳಕಂಡ ಆದೇಶ.

**" ಆದೇಶ "**

ಆರ್. ವೆಂಕಟೇಶ್ ಪದಕಿ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಪೊಲೀಸ್ ಉಪ ನಿರೀಕ್ಷಕರು, ಕಳಸ ಪೊಲೀಸ್ ಠಾಣೆ ಇವರ ಕ್ರೈಂ ನಂ. 42/2010, ದಿನಾಂಕ: 08–09–2010 ರಲ್ಲಿ ವಶಪಡಿಸಿಕೊಂಡ ಕೆ.ಎ.34–5475ರ ಟಾಟಾಸುಮೋ ಹಾಗೂ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 9.640 ಲೀಟರ್ ಕಳ್ಳಭಟ್ಟಿ ಸಾರಾಯಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 15ನೇ ಡಿಸೆಂಬರ್ 2010 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

**ಆರ್. ವೆಂಕಟೇಶ್ ಪದಕಿ**
ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿಆರ್–1773

**ಅಧಿಕಾರಯುತ ಅಧಿಕಾರಿಗಳು ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಇವರ ನ್ಯಾಯಾಲಯದಲ್ಲಿ**
**ಡಿ.ಟಿ.ಸಿ.ಆರ್. ನಂ. 210/2010–11, ದಿನಾಂಕ:15ನೇ ಡಿಸೆಂಬರ್, 2010**

**ಪೊಲೀಸ್ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಚಿಕ್ಕಮಗಳೂರು**
**ಇವರ ಕ್ರೈಂ ನಂ.85/2010, ದಿನಾಂಕ:11–09–2010**

**ಉಪಸ್ಥಿತರು:** ಆರ್. ವೆಂಕಟೇಶ ಪದಕಿ ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು

| **ಪಿರ್ಯಾದುದಾರರು** | **ಆಪಾದಿತರು** |
| --- | --- |
| ಪೊಲೀಸ್ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಚಿಕ್ಕಮಗಳೂರು | ಶ್ರೀ ಅನ್ವರ್ ಬಿನ್ ಲೇಟ್ ಬಾಲೇಖಾನ್ ಸಾಬ್ |

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:11–09–2010 ರಂದು ಮಧ್ಯಾಹ್ನ 3–45 ಗಂಟೆ ಸಮಯದಲ್ಲಿ ಬಂದ ಖಚಿತ ವರ್ತಮಾನದ ಮೇರೆಗೆ ಪೊಲೀಸ್ ಉಪ ನಿರೀಕ್ಷಕರು, ಅಬಕಾರಿ ಲಾಟರಿ ನಿಷೇಧ ದಳ, ಚಿಕ್ಕಮಗಳೂರು ಜಿಲ್ಲೆ ಇವರು ತಮ್ಮ ಸಿಬ್ಬಂದಿಗಳು ಹಾಗೂ ಪಂಚರುಗಳೊಂದಿಗೆ ಕಡೂರು ನಗರದ ಕೆ.ಎಂ. ರಸ್ತೆಯಲ್ಲಿ ಮಂಜುನಾಥ್ ಹುಡ್ ಇಂಡಸ್ಟ್ರೀಸ್ ಹತ್ತಿರ ಗಸ್ತು ಕಾರ್ಯ ನಿರ್ವಹಿಸುತ್ತಿದ್ದಾಗ ಬರುತ್ತಿದ್ದು ಒಂದು ಅಂಬಾಸಿಡರ್ ಕಾರನ್ನು ತಡೆದು ನಿಲ್ಲಿಸಿ ಪಂಚರ ಸಮಕ್ಷಮ ಪರಿಶೀಲಿಸಿದಾಗ ಸಿಕೆಎಂ:2925ರ ಬಿಳಿಬಣ್ಣದ ಅಂಬಾಸಿಡರ್ ಆಗಿದ್ದು, ಅದರೊಳಗೆ ಒಂದು ರಟ್ಟಿನ ಪೆಟ್ಟಿಗೆಯ 180 ಮಿಲಿಯ 48 ಸೀಸೆಯಂತೆ ಒಟ್ಟು 7 ರಟ್ಟಿನ ಪೆಟ್ಟಿಗೆಯಲ್ಲಿ 180 ಮಿಲಿಯ 336 ಸೀಸೆಗಳಲ್ಲಿ 60.480 ಲೀಟರ್ ಶೂಟ್ ಡೀಲಕ್ಸ್ ವಿಸ್ಕಿ ಮದ್ಯ ಹೊಂದಿದ್ದು, ಸದರಿ ಮದ್ಯ ಸಾಗಾಣಿಕೆಗೆ ಸಂಬಂಧಿಸಿದಂತೆ ಕಾರ್ ಚಾಲನೆ ಮಾಡುತ್ತಿದ್ದು ಆಸಾಮಿ ಅನ್ವರ್ ಬಿನ್ ಲೇಟ್ ಬಾಲೇಖಾನ್ ಸಾಬ್, ಮೊದಲಿಯರ್ ಕಾಲೋನಿ, ಕಡೂರು ಇವರನ್ನು ವಿಚಾರಿಸಿದಾಗ ಯಾವುದೇ ರಹದಾರಿ ವಗೈರೆ ಇತ್ಯಾದಿ ದಾಖಲಾತಿಗಳನ್ನು ಹಾಜರುಪಡಿಸಿದಲ್ಲದೆ ಕಾರಣ ಅಕ್ರಮ ಮದ್ಯವೆಂದು ದೃಢಪಡಿಸಿಕೊಂಡು ಸ್ಥಳದಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ, ಆರೋಪಿಯನ್ನು ದಸ್ತಗಿರಿಗೊಳಿಸಿ ಕಾರ್ ಮತ್ತು ಮದ್ಯವನ್ನು ವಶಪಡಿಸಿಕೊಂಡು ಸ್ವ ಫಿರ್ಯಾದು ವರದಿಯನ್ನು ದಾಖಲಿಸಿಕೊಂಡು ಕ್ರೈಂ ನಂ.85/2010, ದಿನಾಂಕ:11–09–2010 ರಂದು ಮೊಕದ್ದಮೆ ದಾಖಲಿಸಿ ಪ್ರಥಮ ವರ್ತಮಾನ ವರದಿಯನ್ನು ಘನ ನ್ಯಾಯಾಲಯಕ್ಕೆ ಹಾಗೂ ಮೇಲಾಧಿಕಾರಿಗಳಿಗೆ ಸಲ್ಲಿಸಿ, ತನಿಖೆ ಮುಂದುವರೆಸಿ, ಪ್ರಕರಣದ ಜಪ್ತುಪಡಿಸಿದ ಮದ್ಯದ ಪೈಕಿ ಮಾದರಿ ಹೊರತುಪಡಿಸಿದ ಮದ್ಯ ಹಾಗೂ ಅಂಬಾಸಿಡರ್ ಕಾರ್ ವಾಹನವನ್ನು ಈ ಪ್ರಾಧಿಕಾರದ ಅನುಮತಿ ಮೇರೆಗೆ ಮುಂದಿನ ವಿಲೇವಾರಿಗಾಗಿ ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರಿಗೆ ಹಸ್ತಾಂತರಿಸಿರುತ್ತಾರೆ.

ಅಬಕಾರಿ ನಿರೀಕ್ಷಕರು, ಕಡೂರು ವಲಯ ಇವರು ದಿನಾಂಕ:28–10–2010 ರಂದು ಸಲ್ಲಿಸಿರುವ ವರದಿಯಲ್ಲಿ ಮೇಲ್ಕಾಣಿಸಿರುವ ಮುದ್ದೆಮಾಲುಗಳನ್ನು ದಿನಾಂಕ:11–10–2010 ರಂದು ಸ್ವೀಕರಿಸಿದ್ದು, ಜಪ್ತುಪಡಿಸಿದ ಸಿಕೆಎಂ:2925 ರ ಅಂಬಾಸಿಡರ್ ಕಾರ್‌ಗೆ ಸಂಬಂಧಿಸಿದಂತೆ ತಮ್ಮದೆಂದು ಯಾರು ಇದುವರೆವಿಗೂ ಹಕ್ಕು ಸಾಧಿಸಲು ಮುಂದೆ ಬಂದಿರುವುದಿಲ್ಲ. ಅಲ್ಲದೇ ಸ್ವತ್ತುಗಳನ್ನು ಕಛೇರಿಯಲ್ಲಿ ಇಟ್ಟುಕೊಳ್ಳಲು ಸ್ಥಳಾವಕಾಶದ ಕೊರತೆ ಇರುವುದರಿಂದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮದ್ಯವನ್ನು ನಾಶಪಡಿಸಲು ಆದೇಶ ನೀಡಬೇಕೆಂದು ಕೋರಿರುತ್ತಾರೆ.

ವಶಪಡಿಸಿಕೊಂಡ ವಾಹನ ಹಾಗೂ ಮದ್ಯಕ್ಕೆ ಸಂಬಂಧಿಸಿದಂತೆ ಈ ಪ್ರಾಧಿಕಾರವು ಮುಟ್ಟುಗೋಲಿನ ನಡವಳಿಗಳನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರಾರಂಭಿಸಿ ವಾಹನದ ಮಾಲೀಕತ್ವದ ಹಾಗೂ ಮೌಲ್ಯದ ವಿವರಗಳನ್ನು ನೀಡುವಂತೆ ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಚಿಕ್ಕಮಗಳೂರು ಇವರಿಗೆ ಪತ್ರ ಬರೆದು ಪ್ರಕರಣದಲ್ಲಿರುವ ಆರೋಪಿಯಾದ ಅನ್ವರ್ ಬಿನ್ ಲೇಟ್ ಬಾಲೇಖಾನ್ ಸಾಬ್, ಮೊದಲಿಯರ್ ಕಾಲೋನಿ, ಕಡೂರು ಇವರಿಗೆ ಜಪ್ತುಪಡಿಸಿದ ಮದ್ಯ ಹಾಗೂ ವಾಹನವನ್ನು ಸರ್ಕಾರಕ್ಕೆ ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂದು ಕಾರಣ ಕೇಳಿ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 (ಬಿ) ಅಡಿಯಲ್ಲಿ ನೊಂದಾಯಿತ ಅಂಚೆ ಮೂಲಕ ನೋಟಿಸ್ ಜಾರಿ ಮಾಡಲು ಕ್ರಮ ಕೈಗೊಂಡಿದ್ದು, ನೋಟಿಸ್ ದಿನಾಂಕ:23–11–2010 ರಂದು ಜಾರಿಯಾದ ಬಗ್ಗೆ ಸ್ವೀಕೃತಿ ಈ ಪ್ರಾಧಿಕಾರಕ್ಕೆ ಮರಳಿ ಬಂದಿರುತ್ತದೆ.

ಈ ಪ್ರಕರಣದಲ್ಲಿ ಜಪ್ತುಪಡಿಸಿದ ಸ್ವತ್ತುಗಳಿಗೆ ಹಕ್ಕು ಸಾಧಿಸಲು ಯಾರು ಪ್ರಾಧಿಕಾರದ ಮುಂದೆ ಬಂದಿರುವುದಿಲ್ಲ ಹಾಗೂ ಪ್ರಕರಣದಲ್ಲಿ ಆರೋಪಿ ಅನ್ವರ್ ಬಿನ್ ಲೇಟ್ ಬಾಲೇಖಾನ್ ಸಾಬ್, ಮೊದಲಿಯರ್ ಕಾಲೋನಿ, ಕಡೂರು ಇವರು ಈ ಪ್ರಾಧಿಕಾರದಿಂದ ನೀಡಲಾದ ಕಲಂ 43 (ಬಿ) ನೋಟಿಸ್‌ನ್ನು ಸ್ವೀಕರಿಸಿಯೂ ಸಹ ಅದಕ್ಕೆ ಪೂರಕವಾಗಿ ಆಪಾದನೆಯನ್ನು ಅಲ್ಲಗೆಳೆಯಲು ಯಾವುದೇ ದಾಖಲೆಗಳ ಮೂಲಕವಾಗಲೀ ಅಥವಾ ಸಾಕ್ಷ್ಯಗಳ ಮೂಲಕವಾಗಲಿ ತಾವು ಕೃತ್ಯದಲ್ಲಿ ಭಾಗಿಯಾಗಿಲ್ಲ ಮತ್ತು ಈ ಕೃತ್ಯಕ್ಕೆ ವಾಹನವನ್ನು ಬಳಸಲಾಗಿಲ್ಲವೆಂಬ ಬಗ್ಗೆ ನಿರೂಪಿಸದೇ ಇರುವ ಅಂಶಗಳು. ಸಾಕ್ಷ್ಯಗಳು ಹಾಗೂ ಪ್ರಾಧಿಕಾರದ ಮುಂದೆ ಇರುವ ದಾಖಲೆಗಳನ್ನು ಸಹಾಯಕ ಅಭಿಯೋಗ ನಿರ್ದೇಶಕರು, ಪ್ರಾಧಿಕಾರದ ಮುಂದೆ ವಾದ ಮಂಡಿಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವೆಂದು ಅಭಿಪ್ರಾಯಪಟ್ಟಿರುತ್ತಾರೆ.

ಮೊಕದ್ದಮೆ ದಾಖಲಾಗಿ 3 ತಿಂಗಳು 5 ದಿವಸ ಅವಧಿ ಕಳೆದಿದ್ದು, ವಾಹನದ ಮಾಲೀಕರೆಂದು ಯಾರು ಮುಂದೆ ಬಂದು ಹಕ್ಕು ಸಾಧಿಸಿರುವುದಿಲ್ಲ ಪ್ರಕರಣದಲ್ಲಿರುವ ಆರೋಪಿಗಳಿಗೆ ನೋಟಿಸ್ ಜಾರಿಯಾಗಿದ್ದರೂ ಸಹ, ನೋಟೀಸ್‌ಗೆ ಸಮಜಾಯಿಸಿ ಸಲ್ಲಿಸಿರುವುದಿಲ್ಲ. ಅಲ್ಲದೆ ಯಾರು ವಾಹನ ಮತ್ತು ಮದ್ಯದ ಮೇಲೆ ಹಕ್ಕು ಸಾಧಿಸಲು ವಾಹನವನ್ನು ಈ ಕೃತ್ಯಕ್ಕೆ ಬಳಸಿಲ್ಲ ಎಂಬುದನ್ನು ಸಾಕ್ಷಧಾರಗಳ ಮುಖಾಂತರ ಪ್ರಾಧಿಕಾರದ ಮುಂದೆ ಇದುವರೆವಿಗೂ ತಾವಾಗಲೀ ಅಥವಾ ತಮ್ಮ ನ್ಯಾಯವಾದಿಗಳ ಮುಖಾಂತರವಾಗಲಿ ಹಾಜರಾಗಿ ಸಾಬೀತುಪಡಿಸದೇ ಇರುವುದರಿಂದ ಸಹಾಯಕ ಅಭಿಯೋಗ ನಿರ್ದೇಶಕರವರ ವಾದದಿಂದ ಮೇಲ್ನೋಟಕ್ಕೆ ಸಾಬೀತಾಗುವುದರಿಂದ ಅಲ್ಲದೇ ಪ್ರಾಧಿಕಾರದ ಮುಂದೆ ಹಾಜರಾಗಿ ಅಧಿಕೃತ ದಾಖಲಾತಿ ಪತ್ರಗಳೊಂದಿಗೆ ವಾಹನದ ಮೇಲೆ ಹಕ್ಕು ಸಾಧಿಸದೇ ಇರುವುದರಿಂದ ಹಾಗೂ ಜಪ್ತಾಗಿರುವ ವಾಹನವು ಇಲಾಖಾ ವಶದಲ್ಲಿಯೇ ಇದ್ದು ತಟಸ್ಥ ಸ್ಥಿತಿಯಲ್ಲಿ ಹಾಗೆಯೇ ಬಿಟ್ಟಲ್ಲಿ ಪ್ರಕೃತಿಯ ವೈಪರೀತ್ಯಗಳಿಗನುಗುಣವಾಗಿ ಹಾಳಾಗಿ ಸರ್ಕಾರದ ರಾಜಸ್ವಕ್ಕೆ ಧಕ್ಕೆ ಉಂಟಾಗುವ ಸಂಭವವಿರುವುದರಿಂದ ಹಾಗೂ ಮೊಕದ್ದಮೆಯ ಶೀಘ್ರ ವಿಲೇವಾರಿ ದೃಷ್ಟಿಯಿಂದ ವಶಪಡಿಸಿಕೊಂಡ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಪ್ರಾಧಿಕಾರಕ್ಕೆ ಮನವರಿಕೆ ಯಾಗಿರುವುದರಿಂದ ಈ ಕೆಳಕಂಡ ಆದೇಶ.

**" ಆದೇಶ "**

ಆರ್. ವೆಂಕಟೇಶ್ ಪದಕಿ, ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್, ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು ಆದ ನಾನು ಪೊಲೀಸ್ ಉಪ ನಿರೀಕ್ಷಕರು, ಅಬಕಾರಿ ಜಾರಿ ಮತ್ತು ಲಾಟರಿ ನಿಷೇಧ ದಳ, ವಿಶೇಷ ಪೊಲೀಸ್ ಠಾಣೆ, ಚಿಕ್ಕಮಗಳೂರು ಇವರ ಕ್ರೈಂ ನಂ. 85/2010, ದಿನಾಂಕ: 11–09–2010 ರಲ್ಲಿ ವಶಪಡಿಸಿಕೊಂಡ ವಾಹನ ಸಂಖ್ಯೆ:ಸಿಕೆಎಂ:2925(ಅಂಬಾಸಿಡರ್ ಕಾರ್) ಹಾಗೂ ರಾಸಾಯನಿಕ ಪರೀಕ್ಷೆಗೆ ಮಾದರಿ ತೆಗೆದು ಉಳಿದ 59.220 ಲೀಟರ್ ಮದ್ಯವನ್ನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕಲಂ 43 (ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿ ಕಲಂ 43 (ಸಿ) ಅಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸಿರುತ್ತೇನೆ.

ಈ ಆದೇಶವನ್ನು ಇಂದು ಅಂದರೆ 15ನೇ ಡಿಸೆಂಬರ್ 2010 ರಂದು ಬೆರಳಚ್ಚುಗಾರರಿಗೆ ಉಖ್ತಲೇಖನ ಕೊಟ್ಟು ಗಣಕಯಂತ್ರದಲ್ಲಿ ಬೆರಳಚ್ಚಿಸಿದ ನಂತರ ತಪ್ಪುಗಳನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿನಗಳ ನಂತರ ಜಾರಿಯಲ್ಲಿ ಬರುತ್ತದೆ.

**ಆರ್. ವೆಂಕಟೇಶ್ ಪದಕಿ**

ಅಧಿಕಾರಯುತ ಅಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಎಕ್ಸೈಸ್,
ಚಿಕ್ಕಮಗಳೂರು ಜಿಲ್ಲೆ, ಚಿಕ್ಕಮಗಳೂರು.

ಪಿಆರ್–1774

**KARNATAKA ELECTRICITY REGULATORY COMMISSION**

**BANGALORE – 560 001**

**Notification No. S/03/1 dated 16th March 2011**

**KERC (Power Procurement from Renewable Sources by Distribution Licensee and Renewable Energy Certificate Framework) Regulations, 2011**

**Preamble**

In exercise of powers conferred under Section 86(1)(e) read with Section 181 of the Electricity Act, 2003, the Karnataka Electricity Regulatory Commission had issued KERC (Power Procurement from Renewable Sources by Distribution Licensee) Regulations 2004 vide Notification No. S/03/1 dated 27.09.2004. The above Regulations were amended vide Notification No. S/03/1 dated 23rd January 2008, fixing a minimum of 10 % Renewable Energy Purchase Obligation (RPO) to BESCOM, MESCOM & CESC and 7 % to HESCOM, GESCOM & Hukkeri Co-operative Society.

The Central Electricity Regulatory Commission (CERC), on 14.01.2010, has issued the CERC (Terms & Conditions for recognition & issuance of Renewable Energy Certificate for Renewable Energy Generation) Regulations, 2010 to facilitate meeting of Renewable Purchase Obligation (RPO) by Purchase of Renewable Energy Certificates (REC).

The Commission had issued draft KERC (Power Procurement from Renewable Sources by Distribution Licensee) Regulations, 2010, inviting comments / suggestions from Stakeholders. The Commission also had a public hearing in the matter on 24.01.2010.

The Commission, having duly considered the comments and suggestions received and in exercise of the powers conferred under Clause (e) of sub Section (1) of Section 86 read with Section 181 of the Electricity Act, 2003 (Central Act 36 of 2003) and all other powers enabling it in this behalf, makes the following Regulations :

1. **Short Title application and commencement. –** (1) These Regulations shall be called the Karnataka Electricity Regulatory Commission (Procurement of Energy from Renewable Sources) Regulations, 2011.

(2) These Regulations shall extend to the whole of the State of Karnataka.

(3) These Regulations shall come into force from the first day of April 2011.

**2. Definitions: -** (1) In these regulations, unless the context otherwise requires. –

(a) "Act" means the Electricity Act, 2003 (Act 36 of 2003);

(b) "Central Agency" means the agency as the Central Commission may designate from time to time under CERC (Terms and Conditions for Recognition & Issuance of Renewable Energy Certificate for Renewable Energy Generation) Regulations, 2010;

(c) "Central Commission" means the Central Electricity Regulatory Commission (CERC);

(d) "Commission" means the Karnataka Electricity Regulatory Commission (KERC);

(e) "Distribution Licensee" means a licensee authorized to operate and maintain a distribution system for supplying electricity to the consumers in his area of supply;

(f) "Licensee" means a person who has been granted license under section 14 of the Act;

(g) "MNRE" means the Ministry of New and Renewable Energy;

(h) "REC" means renewable energy certificates issued by the Central agency;

(i) "Renewable sources of energy" means non-conventional, renewable electricity generating sources such as mini-hydel, micro-hydel, wind, solar, biomass (including bagasse based co-generation), urban/ municipal waste, or such other sources as approved by the MNRE, Government of India, or Government of Karnataka;

(j) "RPO" means Renewable Energy Purchase Obligation as may be specified by the Commission under clause (e) of sub-section (1) of section 86 of the Act;

(k) "State" means the State of Karnataka;

(l) "State Agency" means the agency as designated by the Commission to give accreditation to the projects based on renewable sources of energy and to undertake such functions as may be specified or directed by the Commission;

(m) "State Transmission Utility (STU)" means the Board or Company notified as such by the State Government under sub-section (1) of section 39 of the Act;

(n) "Tariff" means the tariff determined by the Commission for sale of energy from a generating station using renewable sources of energy to a distribution licensee;

(o) "Year" means a financial year;

(2) The words and expressions used in these Regulations, and not defined herein but defined in the Act, shall have the same meaning as in the Act.

**3. These Regulations shall apply to :**

(i) Distribution Licensees operating in the State of Karnataka;

(ii) Any other person consuming electricity generated from captive generating plant or plants, using other than renewable sources and having a total capacity exceeding 5 MW; and

(iii) Any person consuming electricity with a contract Demand exceeding 5 MW procured by open access from sources other than renewable sources of energy.

**4. Quantum of purchase of electricity from Renewable Sources of Energy.-**

(i) Every Distribution Licensee shall purchase a minimum quantity of electricity from renewable sources of energy expressed as a percentage of its total procurement during a year as specified below :

| ESCOM | RPO for RE sources other than Solar | Solar RPO |
|---|---|---|
| BESCOM | 10 % | 0.25 % |
| MESCOM | 10 % | 0.25 % |
| CESC | 10 % | 0.25 % |
| HESCOM | 7 % | 0.25 % |
| GESCOM | 7 % | 0.25 % |
| Hukkeri Society | 7 % | 0.25 % |

Provided that, a distribution licensee may in case of non-availability of solar power generated in the State of Karnataka procure from other renewable sources of energy or REC to the extent of shortfall in its RPO in any year.

(ii) Every Grid Connected Captive consumer specified in clause 3(ii) above shall purchase a minimum quantity of 5 % of its consumption of energy from captive sources from renewable sources of energy.

(iii) Every Open Access Consumer specified in Clause 3(iii) above shall purchase from renewable sources of energy a minimum quantity of 5% of its consumption through Open Access sources.

(iv) Notwithstanding the limit specified above, procurement of energy from generating companies based on renewable sources of energy, under existing agreements, shall continue till the period of validity of such agreements and such energy purchases shall be accounted for the purpose of meeting RPO.

(v) Every distribution licensee shall indicate the quantum of proposed purchase from renewable sources of energy for the ensuing year in the Expected Revenue from Charges (ERC) filing, duly indicating the sources of purchase.

**5. Renewable Energy Certificates (REC). –** The distribution licensees, Captive Consumers and Open Access Consumers specified in Clause 3 above, may purchase REC to meet either partly or entirely the RPO specified at Clause 4 (1) above.

**6. State Agency.-** (1) The State Agency shall within three months from the date these Regulations coming into force formulate and notify procedures and Terms and Conditions for Accreditation, with prior approval of the Commission thereon, and shall in formulating such procedures be generally guided by the procedures / rules stipulated by the Central Agency under CERC (Terms and Conditions for recognition and issuance of Renewable Energy Generation) Regulations, 2010.

(2) The State agency shall submit to the Commission quarterly reports indicating the details of Renewable Energy Generators to whom accreditation is accorded and the compliance of renewable purchase obligation by the Distribution Licensees, and other consumers specified above.

(3) The Commission may from time to time fix the charges payable by RE Generating Companies to the State Agency for discharge of its functions under these regulations.

**7. Conditions for Accreditation.-** Renewable Energy Generators in the State applying for accreditation to the State Agency for securing REC shall satisfy the following conditions : -

(a) The Generating Companies shall not have any subsisting power purchase agreements related to such generation with any of the distribution licensees of the State;

(b) A Generating Company shall not, in case of premature termination of a power purchase agreement, be eligible in respect of the generation capacity covered by such PPA, for participating in REC Scheme for a period of one year from the date of termination of such agreement or till the scheduled date of expiry of PPA, whichever is earlier.

(c) A Generating Company opting for REC Scheme shall sell the electricity generated by it to ESCOMs of the State at the pooled cost of power purchase as approved by the Commission for the previous year in its tariff orders escalated for inflation.

(d) Captive Power Producers (CPP) based on renewable sources of energy shall be eligible to get accredited for obtaining RE certificates for the entire energy generated from their plants including the energy used for captive consumption.

(e) If any Generating Company obtains accreditation contrary to these Regulations, the Commission may either suo motu or otherwise cancel the accreditation after giving notice to such Generating Company.

**8. Non-Compliance of RPO by Distribution Licensee.-** (1) If a distribution licensee or other consumer specified in clause 3 above fails to comply with the renewable purchase obligation as specified in these regulations during any year, the Commission may direct the distribution licensee or such other consumer to deposit such amount as the Commission may determine into a separate fund, to be created and maintained as directed by the Commission.

(2) The distribution licensee or other consumer shall utilize the fund so collected for promoting renewable sources of energy or energy conservation measures with the prior approval of the Commission from time to time.

(3) In case of any difficulty arises in complying with the renewable purchase obligation in any year, because of non-availability of renewable energy or REC, the Commission may permit the distribution licensee/other persons specified in Clause (3) above to carry forward the compliance requirement to the next year.

**9. Determination of Tariff for electricity from Renewable sources of energy.-** (1) The Commission may determine at any time the tariff for purchase of electricity from Renewable sources of energy by Distribution Licensees either suo motu or on an application either by generator or by Distribution Licensee;

Provided that the tariff approved by the Commission including the PPAs deemed to have been approved under sub-section (2) of section 27 of the Karnataka Electricity Reforms Act, 1999, prior to the coming into force of these regulations shall continue to apply for such period as mentioned in those PPAs.

Provided further that the Commission shall adopt the tariff which has been arrived at through a transparent process of bidding in accordance with the guidelines issued by the Central Government under Section 63 of the Act.

(2) The Commission shall determine the tariff separately for each category of renewable sources of energy mentioned in clause 2(i).

(3) The Commission shall be guided by the principles and methodologies, if any, specified by the CERC, National Electricity Policy, and Tariff Policy, while determining tariff for renewable sources of energy.

(4) While determining the tariff, the Commission may consider factors affecting the costs of generation including technology, fuel, market risk, environmental benefits and social contribution and other relevant factors relating to each type of renewable sources of energy.

**10. Power to amend:** The Commission may from time to time add, vary, alter, modify or amend any provisions of these Regulations.

**11. Power to call for information:** The Commission may call for information or documents as may be necessary from the Distribution Licensees and other consumers specified in clause 3 above, to monitor the compliance of these Regulations.

**12. Power to remove difficulties.-** The Commission may at any time either suo motu or otherwise by order remove any difficulty arising in giving effect to the provisions of these regulations.

**13. Repeal & Savings.-** (1) The KERC (Power Procurement from Renewable Sources by Distribution Licensee) Regulations 2004, along with amendments thereto are hereby repealed.

